# ಸಿದ್ಧಗಂಗಾ

ಸಂಪುಟ : ೪೦ ಜನವರಿ ೨೦೦೪ ಸಂಚಿಕೆ : ೧

ಸಂಕ್ರಾಂತಿ ಸಂಚಿಕೆ

ಡಿಸೆಂಬರ್ ೨೧ರಂದು ಬೆಂಗಳೂರಿನಲ್ಲಿ ನಡೆದ ಹಿರಿಯ ಗಾಂಧಿವಾದಿ, ರಾಜ್ಯಸಭಾ ಸದಸ್ಯ ಶ್ರೀ ಎಂ.ವಿ. ರಾಜಶೇಖರನ್ ೭೫ ಅಭಿನಂದನಾ ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿ ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಿರುವುದು. ವೇದಿಕೆಯಲ್ಲಿ: ಶ್ರೀಮತಿ ರಾಜಶೇಖರನ್, ಶ್ರೀ ಎಂ.ವಿ. ರಾಜಶೇಖರನ್, ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ, ರಾಜ್ಯಸಭಾ ಸದಸ್ಯ ಶ್ರೀ ಸಿ. ಅರ್ಜುನ್ ಸಿಂಗ್ ಮತ್ತು ಕರ್ನಾಟಕ ವಿಧಾನ ಪರಿಷತ್ ಮಾನ್ಯ ಸಭಾಪತಿಗಳಾದ ಶ್ರೀ ಬಿ.ಎಲ್. ಶಂಕರ್ ಅವರು.



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ಈ ಸಂದರ್ಭದಲ್ಲಿ ಹರಗುರು ಚರಮೂರ್ತಿಗಳು ಹಾಗೂ ಪ್ರಸಿದ್ಧ ಸಾಹಿತಿ ಪ್ರೊ. ಎಚ್ಎಸ್ಕೆ ಅವರು ಉಪಸ್ಥಿತರಿದ್ದರು.

ಸಂಭ್ರಮದ ಸಂಕ್ರಾಂತಿ ಹಬ್ಬದ ಆಚರಣೆ.




ಮುಖಪುಟ
ಶ್ರೀ ಎಂ.ವಿ. ರಾಜಶೇಖರನ್
ಅಭಿನಂದನಾ ಸಮಾರಂಭ
ಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳ
ವಾರ್ಷಿಕ ಅಧಿವೇಶನ
ಸಂಭ್ರಮದ ಸಂಕ್ರಾಂತಿ ಹಬ್ಬ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೦ ಜನವರಿ ೨೦೦೪ ಸಂಚಿಕೆ : ೧

## ಒಳಪುಟಗಳಲ್ಲಿ..........



ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ
ಸಂಪಾದಕ
ಹೆಚ್.ವಿ. ವೀರಭದ್ರಯ್ಯ
ಸಹ ಸಂಪಾದಕ
ಎಚ್.ಎಸ್. ಸಿದ್ದಗಂಗಪ್ಪ
ಸಂಚಾಲಕ
ಎಂ. ರೇಣುಕಾರಾಧ್ಯ
ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ದಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪
ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ.೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೩೬೦೪೦೮೭

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ದಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/– |
| ಶ್ರೀ ಸಿದ್ದಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೬೦೦/– |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |



## ಹೊಸ ವರ್ಷ ಹರುಷ ತರಲಿ....

ಹೊಸ ವರ್ಷವನ್ನು ಸ್ವಾಗತಿಸುತ್ತ, ಹಳೆಯ ವರ್ಷವನ್ನು ಮೆಲಕು ಹಾಕುತ್ತ ಮುನ್ನಡೆಯುತ್ತಿದ್ದೇವೆ. ಕಳೆದ ಕಾಲ ಮತ್ತೆ ಬರದು. ಆದರೆ ಕಳೆದು ಹೋದ ಕಾಲ ಕೊಟ್ಟು ಹೋದ ಅನುಭವದ ಬುತ್ತಿ ಕಟ್ಟಿಕೊಂಡೇ ಹೆಜ್ಜೆಹಾಕಬೇಕಲ್ಲವೆ? ಲೋಕ ಜೀವನದಲ್ಲಿ ನಡೆದ ವಿಧ್ವಂಸಕ ಕೃತ್ಯಗಳ ನೋವು ಇನ್ನೂ ಹಸಿಹಸಿಯಾಗಿಯೇ ಇದೆ. ಒಂದೇ, ಎರಡೇ? ನೂರು? ಸಾವಿರವಾಗಿವೆ. ಹಾಗೆಂದು ಹತಾಶರಾಗುವುದೆ? ಮುಂದೆ ಸಾಗಲೇ ಬೇಕಲ್ಲ?

ಇದೀಗ ರಾಷ್ಟ್ರವನ್ನೇ ಅಲುಗಾಡಿಸುತ್ತಿರುವ ಘಟನೆಗಳು ಒಂದು ಕಡೆಗಾದರೆ, ಜಗತ್ತನ್ನೇ ತಲ್ಲಣಗೊಳಿಸುತ್ತಿರುವ ವಿದ್ಯಮಾನಗಳು ಮತ್ತೊಂದು ಕಡೆ. ಬಲಿಷ್ಟ ರಾಷ್ಟ್ರಗಳ ಅಧಿಕಾರ ದಾಹ, ಭ್ರಷ್ಟಾಚಾರ ಮುಗಿಲು ಮುಟ್ಟಿರುವ ಕೋಟಿ ಕೋಟಿ ರೂಪಾಯಿಗಳ ಛಾಪಾ ಕಾಗದದ ಹಗರಣ, ಕೋಮುವಾದದ ಆರೋಪ-ಪ್ರತ್ಯಾರೋಪಗಳು, ಜನತಂತ್ರ ವ್ಯವಸ್ಥೆಯನ್ನು ಬುಡಮೇಲುಮಾಡುವಷ್ಟು ರೌಡಿಗಳ ಬೆಳವಣಿಗೆ, ಯುವ ಜನತೆಯನ್ನು ಕುಮಾರ್ಗದತ್ತ ಸೆಳೆಯುವ ಆಕರ್ಷಣೆಗಳು ಒಂದು ಕಡೆಗಾದರೆ, ಜಾಗತೀಕರಣ, ಉದಾರೀಕರಣ, ಔದ್ಯೋಗಿಕರಣ, ಕೈಗಾರಿಕೆಗಳಂಥ ಈ ಕರಣಗಳ ವಾಕರಿಕೆ ಮತ್ತೊಂದು ಕಡೆ. ಎಲ್ಲಕ್ಕೂ ನಾವೇ ಜವಾಬ್ದಾರರು ಎಂಬುದನ್ನರಿಯದ ಮನೋಭಾವದ ಶೂನ್ಯಸ್ಥಿತಿ. ನಮ್ಮನ್ನಾಳುತ್ತಿರುವ ಜನನಾಯಕರ ಸ್ವಾರ್ಥ, ಸ್ವಹಿತಾಸಕ್ತಿಯ ಚಿಂತನೆಗಳ ನಿಗಿನಿಗಿಸುತ್ತಿರುವ ದಳ್ಳುರಿಯ ನಡುವೆ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ರೈತಬಂಧು. ಸರಳ ಜೀವನದ ಗಂಧಗಾಳಿಯರಿಯದ ರಾಜಕೀಯ ಮುಖಂಡರ ಐಷಾರಾಮದ ಜೀವನ ಶೈಲಿ, ಔಚಿತ್ಯವರಿಯದೆ ಕಾಲೇಜುಗಳ, ಬಿ.ಇಡಿ, ಡಿ.ಇಡಿ ಕಾಲೇಜುಗಳ ಪ್ರಾರಂಭಕ್ಕೆ ಅನುಮತಿ, ಪಿಂಚಣಿದಾರರ ಜೀವನಾಧಾರಕ್ಕೆ ಕತ್ತರಿಹಾಕುವ ಹುನ್ನಾರ, ಇವೆಲ್ಲ ೨೦೦೪ಕ್ಕೆ ೨೦೦೩ ಕೊಟ್ಟು ಹೋದ ಬಿಟ್ಟು ಹೋದ ಕಹಿಫಲ.

'ಸಿದ್ಧಗಂಗಾ' ಪತ್ರಿಕೆ ೩೯ನ್ನು ದಾಟಿ ೪೦ಕ್ಕೆ ಕಾಲಿಡುತ್ತಿದೆ. ತ್ರೈಮಾಸಿಕವಾಗಿ ಆರಂಭವಾದ ಪತ್ರಿಕೆ ಮಾಸಿಕವಾಗಿ ಪರಿವರ್ತನೆಗೊಂಡು ನಲವತ್ತನೆಯ ವರ್ಷದಲ್ಲಿ ಮುನ್ನಡೆಯುವಂಥಾದುದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರ ಆಶೀರ್ವಾದದಿಂದ. ಹಳೆಯ ವಿದ್ಯಾರ್ಥಿ ಸಂಘದ ವತಿಯಿಂದ ಪ್ರಕಟವಾಗುತ್ತಿರುವ 'ಸಿದ್ಧಗಂಗಾ' ಜನಾನುರಾಗಿಯಾಗಿ ಮುಂದುವರಿಯುತ್ತಿದೆ. ವಿದ್ವಾಂಸರು, ಅನುಭವಿಗಳು, ಅಭಿಮಾನಿಗಳು ಮೆಚ್ಚಿಕೊಂಡು ಪತ್ರಿಕೆಯನ್ನು ಬೆಂಬಲಿಸುತ್ತಿದ್ದಾರೆ. ಆಜೀವ ಸದಸ್ಯರಾಗಿ ಪ್ರವರ್ಧಿಸುತ್ತಿದ್ದಾರೆ. ಲೇಖಕರು, ಜಾಹಿರಾತುದಾರರು ಸಹಕರಿಸುತ್ತಿದ್ದಾರೆ. ಶ್ರೀಮಠದ ಹಳೆಯ ವಿದ್ಯಾರ್ಥಿಗಳೆಲ್ಲರೂ ಆಜೀವ ಸದಸ್ಯರಾದುದಾದರೆ ಪತ್ರಿಕೆಯ ನಿರಂತರ ಸೇವೆಗೆ ಬಲ ಬಂದೀತು! ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಆಶ್ರಯದಲ್ಲಿ ನಡೆಯುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿನ ಎಲ್ಲರೂ ಶಿಕ್ಷಕ-ಶಿಕ್ಷಕೇತರ ಬಂಧುಭಗಿನಿಯರು ಆಜೀವ ಸದಸ್ಯರಾದರೆ ಆಗಿರುವವರನ್ನೂ ಬಿಟ್ಟು ಎರಡು ಸಾವಿರಕ್ಕೂ ಹೆಚ್ಚು ಸದಸ್ಯರ ಸಂಖ್ಯೆ ವರ್ಧಿಸುತ್ತದೆ. ಅವರ ಸಹಕಾರವನ್ನು ಪತ್ರಿಕೆ ಕೋರುತ್ತದೆ. ಪತ್ರಿಕೆ ಇನ್ನೂ ಆಕರ್ಷಕವಾಗಿ, ಮೌಲ್ಯಭರಿತ ಲೇಖನಗಳನ್ನು ಒಳಗೊಂಡು ಬರಬೇಕು ಎಂದು ಹಳೆಯ ವಿದ್ಯಾರ್ಥಿಸಂಘದ ಅಪೇಕ್ಷೆಯಾಗಿದೆ. ಸಂಪಾದಕ ಬಳಗ ಹಾಗೂ ಪ್ರಕಾಶಕರು ಅತ್ತ ಪ್ರಯತ್ನಶೀಲರಾಗಿ ಮುಂದುವರಿಯುತ್ತಿದ್ದಾರೆ. ಕಾಲ, ಕಾಲಕ್ಕೆ, ಪತ್ರಿಕೆಗೆ ಸಲಹೆ, ಮಾರ್ಗದರ್ಶನಗಳು ಒದಗಿ ಬರುತ್ತಿರಲಿ ಎಂದು ಆಶಿಸುತ್ತದೆ ಪತ್ರಿಕೆ.

ದಿನಾಂಕ ೧೪.೧೨.೨೦೦೩ರಂದು ಸಮಾವೇಶಗೊಂಡಿದ್ದ ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘದ ಮಹಾಧಿವೇಶನದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ಹೀಗೆಂದರು'' – ಭವ್ಯಕಟ್ಟಡ ಕಟ್ಟುವುದು ಅಥವಾ ದೊಡ್ಡ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದು ನಮ್ಮ ಉದ್ದೇಶವಲ್ಲ. ಅನಾಥ ಮಕ್ಕಳಿಗೆ ಮೂಲಭೂತ ಶಿಕ್ಷಣ ಸೌಲಭ್ಯ ಕಲ್ಪಿಸುವಲ್ಲೇ ನಮಗೆ ಆನಂದವಿದೆ. ನಾವು ನಮ್ಮ ಗುರುಗಳಿಂದ ಶ್ರೀಮಠದ ಧರ್ಮಾಧಿಕಾರ ಸ್ವೀಕಾರಮಾಡಿದಾಗ ಮಠಕ್ಕೆ ಯಾವ ಆಸ್ತಿ ಅಥವಾ ಸಂಪತ್ತು ಇರಲಿಲ್ಲ. ಗುರುಗಳ ತಪಸ್ಸಿನ ಶಕ್ತಿ ಹಾಗೂ ಆಶೀರ್ವಾದದಿಂದಾಗಿ ೮೦ ವಿದ್ಯಾರ್ಥಿಗಳಿಂದ ಸ್ಥಾಪಿತವಾದ ಸಂಸ್ಥೆ ಇಂದು ಎಂಟುಸಾವಿರ ಅನಾಥ ಮಕ್ಕಳಿಗೆ ವಿದ್ಯಾರ್ಜನೆಗೆ ಅವಕಾಶ ಕಲ್ಪಿಸಿಕೊಟ್ಟಿದೆ. ಈ ಜಾತ್ಯತೀತಮಠದಲ್ಲಿ ಎಲ್ಲ ಮಕ್ಕಳೂ ಯಾವುದೇ ಭಿನ್ನಭಾವನೆಯಿಲ್ಲದೆ ಒಟ್ಟಿಗೆ ಕೂತು ಊಟಮಾಡುವುದನ್ನು; ಒಟ್ಟಿಗೇ ಕೂಡಿ ನಕ್ಕುನಲಿದಾಡುವುದನ್ನು ನೋಡುವುದೇ ಆನಂದ''. ಇದಕ್ಕಿಂತ ದೊಡ್ಡದು ಯಾವುದಿರಬಹುದು? ಇದಲ್ಲವೆ ರಾಷ್ಟ್ರನಿರ್ಮಾಣಶೈಲಿ? ಇಂಥ ಪವಿತ್ರಾತ್ಮರ ನೆರಳಿನಲ್ಲಿ ಸಾವಿರಾರು ಮಕ್ಕಳು ಭವಿಷ್ಯದ ಬೆಳಕಿನೆಡೆಗೆ ಹೆಜ್ಜೆಹಾಕುತ್ತಿದ್ದಾರೆ.

'ಸಂಕ್ರಾಂತಿ' ಹಬ್ಬ, ನಾಡಿಗೆ ಹೊಸ ಉತ್ಸಾಹವನ್ನು ತರಲಿ. 'ಎಳ್ಳು ಬೆಲ್ಲ ತಿನ್ನಿ ಒಳ್ಳೆ ಮಾತಾಡಿ'. ಎಲ್ಲರಿಗೆ ಶುಭಾಶಯವನ್ನು ಹಾರೈಸುತ್ತದೆ 'ಸಿದ್ಧಗಂಗಾ'.

– ಸಂಪಾದಕ







## ಸ್ವಾಮಿಗಳ ಪಾವಿತ್ರ್ಯತೆ

ತುಮಕೂರಿನಲ್ಲಿ ಪೊಲೀಸ್ ಇಲಾಖೆಯ ಜಿಲ್ಲಾವರಿಷ್ಠಾಧಿಕಾರಿಯಾಗಿದ್ದ ಶ್ರೀ ಇನ್‌ಫೆಂಟ್ ಅವರು ಶ್ರೀಮಠಕ್ಕೆ ಆಗಾಗ ಬಂದು ಹೋಗುತ್ತಿದ್ದರು. ಅವರೊಬ್ಬ ಒಳ್ಳೆಯ ಕ್ರಿಯಾಶೀಲ ಅಧಿಕಾರಿಯೆನಿಸಿದ್ದರು. ಇಸ್ಲಾಂ ಧರ್ಮಾನುಯಾಯಿಗಳು, ಸುಸಂಸ್ಕೃತರು. ಸರಳ ಸ್ವಭಾವಕ್ಕೆ ಹೆಸರಾಗಿದ್ದರು. ಒಂದು ಸಂದರ್ಭದಲ್ಲಿ ಅವರು ಹೇಳಿದ ಮಾತೊಂದು ಅದೆಷ್ಟು ಮಾರ್ಮಿಕವಾಗಿತ್ತೆಂದರೆ ನೆನಪಿಗೆ ಬಂದಾಗಲೆಲ್ಲ ಚಿಂತನೆ ಮಾಡುವ ಮನಸ್ಸಾಗುತ್ತದೆ. ಮಾತಾದರೂ ಯಾವುದೆನ್ನುತ್ತೀರಿ? ಸ್ವಾಮಿಗಳಾದವರು ಆತ್ಮಾವಲೋಕನಮಾಡಿಕೊಳ್ಳುವಂಥದ್ದು. ''ನೋಡಿ, ಸ್ವಾಮೀಜಿ, ನಾವು ನಿಮ್ಮಲ್ಲಿಗೆ ಬಂದಾಗ ನಿಮ್ಮ ಪಾದಮುಟ್ಟಿ ನಮಸ್ಕಾರ ಮಾಡುತ್ತೇವೆ. ಆದರೆ, ಅದೇ ರಾಷ್ಟ್ರಪತಿಗಳಾಗಲೀ, ಪ್ರಧಾನಮಂತ್ರಿಗಳಾಗಲೀ, ರಾಜ್ಯಪಾಲರು, ಮುಖ್ಯಮಂತ್ರಿಗಳು ಬಂದಾಗ ಅವರುಗಳಿಗೆ ಕೈಯೆತ್ತಿ ವಂದಿಸುತ್ತೇವೆ. ಅಥವಾ ಕೈಮುಗಿದು ಗೌರವ ಸೂಚಿಸುತ್ತೇವೆ, ಕಾಲುಮುಟ್ಟುವುದಿಲ್ಲ'' – ಎಂದು ಹೇಳಿದರು. ಎಷ್ಟೊಂದು ಅರ್ಥಪೂರ್ಣವಾದ ಮಾತು! ಲೌಕಿಕದ ಅಧಿಕಾರ ಎಷ್ಟೆ ದೊಡ್ಡದಿರಲಿ ಗೌರವಿಸುವ ರೀತಿಯೇ ಬೇರೆ. ಆದರೆ, ಸ್ವಾಮಿತ್ವದ ಮಾತು ಬೇರೆ. ಅದು ಪಾವಿತ್ರ್ಯತೆಯ, ಚಾರಿತ್ರ್ಯಶುದ್ಧಿಯ, ಬ್ರಹ್ಮಚರ್ಯಪಾಲನೆಯ, ರಾಗಮುಕ್ತ ಮನಸ್ಸಿನ, ನಿಸ್ವಾರ್ಥ, ನಿಷ್ಕಳಂಕ, ನಿರ್ಮಲತ್ವದ, ದಯೆ, ಕರುಣೆ, ಅನುಕಂಪಗಳ ಸಂಕೇತ. ಆತ್ಮಬಲದ ಅಪೂರ್ವ ವ್ಯಕ್ತಿತ್ವಕ್ಕೆ ತೋರಿಸುವ ಭಕ್ತಿಸಮನ್ವಿತ ಗೌರವ.

ಪಾದಮುಟ್ಟಿ ನಮಸ್ಕರಿಸುವುದು ವ್ಯಕ್ತಿಗಲ್ಲ. ಒಂದು ತತ್ವಕ್ಕೆ. ಆ ತತ್ವ ಪವಿತ್ರಕ್ಕೆ ತೊತ್ತಾಗಿ ಕ್ಷಣ ಕ್ಷಣವೂ ಆತ್ಮಪರೀಕ್ಷೆಯ ನಿಕಷಕ್ಕೆ ಒಳಗಾಗುವ ಮನಸ್ಸಿಗೆ. ಆ ಮಟ್ಟಿನ ಪಾವಿತ್ರ್ಯತೆಯನ್ನು ಕಾಪಾಡಿಕೊಂಡು ಬರುವುದೆಂದರೆ ಹರಿತವಾದ ಖಡ್ಗದ ಮೇಲೆ ನಡೆದಂತೆ. ಅದು 'ಅಸಿಧಾರಾವ್ರತ'. ಕಾಯಾ, ವಾಚಾ, ಮನಸಾ ಶುದ್ಧವಾಗಿರಬೇಕು. ಅದು ಹಣಬಲದಿಂದ ಅಥವಾ ಜನಬಲದಿಂದ ಅಥವಾ ಅಧಿಕಾರಬಲದಿಂದ ಇಲ್ಲವೇ ದೇಹಬಲದಿಂದ ಬರುವಂಥದಲ್ಲ. ಅದು ಮನೋನಿಗ್ರಹದಿಂದ ಬರುವಂಥದು. ಕಾಂಚನ, ಕಾಮಿನಿಗಳ ಆಕರ್ಷಣೆಯಿಂದ ದೂರ ಇದ್ದಾಗ ಬರುವಂಥದು. ಕಣ್ಣು, ನಾಲಗೆ ಮತ್ತು ಮನಸ್ಸುಗಳನ್ನು ತನ್ನ ಹಿಡಿತದಲಿಟ್ಟುಕೊಂಡಾಗ ಲಭ್ಯವಾಗುವಂಥದು. ಇಂದ್ರಿಯಗಳ ವಿಜಯದಿಂದ ಸಾಧಿಸುವಂಥದು.

ಮುಗ್ಧರು ತಮ್ಮ ಪ್ರಾಮಾಣಿಕತೆಯನ್ನು ವ್ಯಕ್ತಪಡಿಸುವ ಸಂದರ್ಭದಲ್ಲಿ ''ಸ್ವಾಮಿಗಳ ಪಾದಾಣೆ'' ಎನ್ನುವ ಸಂಪ್ರದಾಯವುಂಟು. ಅಂತಹ ಪವಿತ್ರವಾದ್ದು ಸ್ವಾಮಿಗಳ ಪಾದವೆಂಬುದು ಎಂದರ್ಥ. ಅದು ದೇವರಿಗೆ ಸಮಾನವಾದುದೆಂಬ ನಂಬಿಕೆ ಭಕ್ತರದು. ತಾಯಿಗೆ ಸಮಾನವಾದುದು, ತಂದೆಗೆ ಸಮಾನವಾದುದು ಎಂಬ ಅಚಲ ಶ್ರದ್ಧೆಯ ನುಡಿ. ಇಷ್ಟೊಂದು ವ್ಯಾಪಕಾರ್ಥವುಳ್ಳ, ಪವಿತ್ರಾರ್ಥಭರಿತವಾದ ಪಾದ ಸ್ವಾಮಿಗಳ ಪಾದವೆಂದು ಮುಗ್ಧರು, ಜ್ಞಾನಿಗಳು, ನಂಬಿ ಪಾದ ಮುಟ್ಟಿ ನಮಸ್ಕರಿಸುವ ಸಂಪ್ರದಾಯವನ್ನು ರೂಢಿಸಿಕೊಂಡು ಬಂದಿದ್ದಾರೆ. ಇದನ್ನು ಒಪ್ಪಿಕೊಳ್ಳುವ ಸ್ವಾಮಿಗಳೆನಿಸಿಕೊಳ್ಳುವವರು ಅದೆಷ್ಟೊಂದು 'ಎಚ್ಚರವನ್ನು, ಒಳ ಎಚ್ಚರ'ವನ್ನು ಕಾಪಾಡಿಕೊಂಡಿರಬೇಕು ಎಂದು ಚಿಂತಿಸಬೇಕಲ್ಲವೆ? ಕೇವಲ ಕಾವಿವಸ್ತ್ರ ಧರಿಸಿದಾಕ್ಷಣ, ಯಾವುದೇ ಒಂದು ಪೀಠವನ್ನೇರಿದಾಕ್ಷಣ, ಜನಬಲವನ್ನಾಶ್ರಯಿಸಿದಾಕ್ಷಣ 'ಪಾದಮುಟ್ಟಿಸಿಕೊಳ್ಳುವ' ಸ್ಥಿತಿ ಬಂದಿತೆಂದುಕೊಳ್ಳುವ ಮನಸ್ಸನ್ನು ಮೋಹಮುಕ್ತವನ್ನಾಗಿಸಿಕೊಳ್ಳಬೇಕಲ್ಲವೆ?

ಪಾದಮುಟ್ಟಿಸಿಕೊಳ್ಳುವುದು ಗರ್ವಗಿರಿಯನ್ನೇರುವುದಕ್ಕಲ್ಲ, ವಿನಯ ಸಮುದ್ರನಾಗುವುದಕ್ಕೆ. 'ಎನಗಿಂತ ಕಿರಿಯರಿಲ್ಲ' ಎಂಬ ಭಾವ ಸಾಮ್ರಾಜ್ಯದ ಸೇವಾಶೀಲನಾಗುವುದಕ್ಕೆ. ಸ್ವಾಮಿಗಳಾಗಿ ಹೋದವರ ಶಿವಪಥದಲ್ಲಿ ಹೆಜ್ಜೆಹಾಕುವುದಕ್ಕೆ ಪಾದಮುಟ್ಟಿಸಿಕೊಳ್ಳುವ ಅರ್ಹತೆ ನನಗಿದೆಯೇ ಎಂದು ತನ್ನನ್ನೇ ತಾನು ಪ್ರಶ್ನಿಸಿಕೊಳ್ಳುವ ಆತ್ಮಪರೀಕ್ಷಣಕ್ಕೆ; ಅದಕ್ಕನುಗುಣವಾಗಿ ಬೆಳೆಯುವುದಕ್ಕೆ.

◆

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ತಲೆವಾಲು ವೊಸರಲು*
*ನೆಲಬೆಂದು ನೀರರತು*
*ಕಿಚ್ಚು ಕೆಟ್ಟಿತ್ತು ನೋಡಾ*
*ಗಾಳಿ ಧೂಳಿಯ ಧಾಳಿನಿಂದು*
*ಅಂಬರದ ಸಂಭ್ರಮವಡಗಿತ್ತು ನೋಡಾ*
*ಹಾಲ ಕುಡಿದ ಶಿಶು ಸತ್ತು ತಾನು ತಾನಾದುದ*
*ನೇನೆಂದುಪಮಿಸುವೆನಯ್ಯಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ !*

ಬ್ರಹ್ಮರಂಧ್ರದಲ್ಲಿ ಸಂಬಂಧಿಸಿರುವ ಪರಮಾತ್ಮ ಸ್ವರೂಪವೇ ಆಗಿರುವ ಪರಶಿವಲಿಂಗವು ಶ್ರೀಗುರುವಿನ ಭಾವ, ಮನ, ಕಣ್ಣುಗಳಿಂದ ಕರಸ್ಥಲಕ್ಕೆ ಆಗಮಿಸಿ, ಶರಣನ ಸ್ಥೂಲ, ಸೂಕ್ಷ್ಮ ಮತ್ತು ಕಾರಣ ತನುವಿನ ಕರಣ ತ್ರಯಂಗಳಲ್ಲಿ ದೀಕ್ಷಾತ್ರಯದಿಂದ ಲಿಂಗತ್ರಯವಾಗಿ ಸಂಬಂಧಿಸಿದ್ದರಿಂದ ದೇಹಭಾವವು ಜ್ಞಾನಾಗ್ನಿಯಿಂದ ಸುಟ್ಟುದರಿಂದ, ಸಂಸಾರ ವಿಷಯರಸ ಬತ್ತಿ, ತಾಪತ್ರಯವೆಂಬ ಅಗ್ನಿ ನಷ್ಟವಾಯಿತು.

ಅಂತಹ ಲಿಂಗಸಂಬಂಧಿ ಶರಣನ ಪ್ರಾಣಾದಿವಾಯುಗಳು ಮಂತ್ರಸ್ವರೂಪವಾಗಿ, ಪಂಚೇಂದ್ರಿಯ ವಿಷಯವು ಪಂಚಲಿಂಗಗಳಿಗೆ ಸಮರ್ಪಣೆಯಾದರೆ ಚಿದಾಕಾಶ ಸ್ವರೂಪನಾದ ಶರಣನ ಕ್ರಿಯಾಚಾರದ ಸಡಗರವು ಲಿಂಗದಲ್ಲಿ ನಿಷ್ಪತ್ತಿಯಾಯಿತು. ಆ ಪರಮಾಮೃತ ಸೇವನೆ ಮಾಡಿದ ಶರಣನು ಸದ್ರೂಪಬ್ರಹ್ಮವೇ ಆದುದರಿಂದ ಅಂತು ಇಂತು, ಹಾಗೆ, ಹೀಗೆ ಎಂದು ಹೋಲಿಸಬಾರದು ಎಂಬುದು ವಚನ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಡೋರಕಕ್ಕಯ್ಯಗಳ ಎಡೆಬಿಡದೆ ಸ್ಮರಿಸುವ
ಧೀರ ಕಾಯಕಯೋಗಿ ಎನಿಸಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹರಳಯ್ಯ ಶರಣರ ಅರಿದರಿದು ನೆನೆಯುವ
ಹರನಕುಮಾರನಾಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮೋಳಿಗೆಮಾರಯ್ಯರ ಮರೆಯದೆ ನೆನೆಯುವ
ಮೋಹಮುಕ್ತನಾಗಿ ಕಂಗೊಳಿಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮೇದಾರ ಕೇತಯ್ಯನ ಸಾದರದಿ ಸ್ಮರಿಸುವ
ಮೇರು ಸಾಟಿಯೆನಿಪ ದಾಸೋಹಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಲಿಯ ಚಂದಯ್ಯಗಳ ನಲಿನಲಿದು ನೆನೆಯುವ
ಕಾಯಕವೆ ಲಿಂಗವೆಂಬ ನಿಜನುಡಿಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾದಾರ ಚೆನ್ನಯ್ಯ ಮಮತೆಯಲಿ ನೆನೆಯುವ
ಮಾನವೀಯತೆಯ ಮಲ್ಲಿಗೆಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವದಾಸಿಮಯ್ಯಗಳ ಸ್ಮರಣೆಯಲಿ ನಗುಕಾಂಬ
ದಾಸೋಹ ತವನಿಧಿಗೆ ತವರಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಂಕರದಾಸಿಮರ ನೆನೆದುಂಡು ನಗುಕಾಂಬ
ಹರಿದ ಮನಗಳನು ಹೊಲಿಯುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಮುಗಿ ಸಿದ್ಧೇಶ್ವರರ ಅನುದಿನದಿ ನೆನೆಯುವ
ಅನುಪಮ ಕುಲಚಿಂತಾಮಣಿ ಎನಿಸಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮರುಳ ಶಂಕರ ಶಿವನ ಮನತುಂಬಿ ಸ್ಮರಿಸುವ
ಮನವ ಮಹಮಾಡಿ ನಡೆದಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ದಾಸೋಹದೀಪ ಶ್ರೀ ಅಟವೀಸ್ವಾಮಿಗಳು

– ಹೆಚ್.ವಿ. ವೀರಭದ್ರಯ್ಯ

"ಸಿದ್ಧಗಂಗೆಯ ಇಂದಿನ ಸೇವಾ ದಾಸೋಹ ಮಣಿಹಕ್ಕೆ "ತವನಿಧಿ"ಯಾಗಿರುವ ಪೂಜ್ಯ ಶ್ರೀ ಅಟವೀಸ್ವಾಮಿಗಳವರು ದೇಶ ಕಾಲವನ್ನು ಮೀರಿ ಬೆಳೆದು ಪ್ರಕಾಶಿಸುತ್ತಿರುವ ಜ್ಯೋತಿ ಸ್ವರೂಪಿಗಳು. ಬಸವಣ್ಣನವರ ತತ್ವಾದರ್ಶಗಳನ್ನು ಸಾಕಾರ ಗೊಳಿಸುವಲ್ಲಿ 'ಉಣ್ಣದ ಲಿಂಗಕ್ಕೆ ಬೋನವ ಹಿಡಿ'ಯೆಂಬ ಉಂಬುವ ಜೀವಿಗೆ ನಡೆ'ಯೆಂಬ ಮೂಢತನವನ್ನು ಹೊಡೆದೋಡಿಸಿ, 'ಜಂಗಮಕ್ಕೆರೆದರೆ ಸ್ಥಾವರ ನೆನೆಯಿತ್ತು', ಎಂಬುದನ್ನು ನಿತ್ಯದಲ್ಲಿ ನಿಜಾಚರಣೆ ಗೊಳಿಸಿದರು. 'ಅಲ್ಲಿ ಸಲ್ಲುವುದಕ್ಕೆ ಇಲ್ಲಿ ಸಲ್ಲುವುದೇ ಆಧಾರವಾಯಿತು. ಪೂಜ್ಯರಿಗೆ ಅರಿವೇ ಗುರುವಾಯಿತು. ಆಚಾರವೇ ಶಿಷ್ಯವಾಯಿತು. ದಯವೇ ಧರ್ಮವಾಯಿತು. ಮಾಡಿನೀಡುವ ಹಸ್ತವೇ ಕಲ್ಯಾಣವಾಯಿತು. ನಿಂದುದೇ ನಿಜ ನಿವಾಸವಾಯಿತು. ನಿದ್ರೆ ಗೈದುದೆ ಜಪ, ಎದ್ದರೆ ಶಿವರಾತ್ರಿ, ನಡೆದುದೇ ಪಾವನ, ನುಡಿದುದೇ ಶಿವತತ್ವವಾಯಿತು. ದೇಹಧರಿಸಿಯೂ ನಿರ್ದೇಹಿಗಳಾಗಿ ಈ ಲೋಕದಲ್ಲಿರುವಾಗಲೇ ಜೀವನ್ಮುಕ್ತರಾಗಿ, ಸಮಾಜದಲ್ಲಿದ್ದೂ ನಿಜವನರಿದ ನಿಶ್ಚಿಂತರಾಗಿ ಮಹವನರಿದಿ ಮಹಂತರಾಗಿ ಬಾಳಿ ಬೆಳಕಾದರವರು. ಶರಣರು ಮೆಟ್ಟಿದ ಧರೆ ಪಾವನಕ್ಷೇತ್ರವೆಂಬುದನ್ನು ಪ್ರತ್ಯಕ್ಷಗೊಳಿಸಿದರು.



ಸಮಾಜದಲ್ಲಿ ಸಮಾನತೆ, ಸ್ವಯಂಪೂರ್ಣತೆ, ಶ್ರಮಗೌರವ, ಗುಣಗೌರವಗಳನ್ನು ಸ್ಥಾಪಿಸಿದಂತೆ ಸಿದ್ಧಾಂತ ದಲ್ಲಿ ಸಮನ್ವಯವನ್ನು ಸಾಧಿಸಿದ ಪೂಜ್ಯರು ಅಷ್ಟಾವರಣಗಳೇ ಅಂಗವಾಗಿ, ಪಂಚಾಚಾರಗಳೇ ಪ್ರಾಣವಾಗಿ, ಷಟ್‌ಸ್ಥಲಗಳೇ ಆತ್ಮವಾಗಿ ಕಂಗೊಳಿಸಿದರು".

"ವೇದ-ಶಾಸ್ತ್ರ-ಆಗಮಗಳು ಧರ್ಮತತ್ವವನ್ನು ಬೋಧಿಸಿದರೂ ಜಂಗಮನ ನಿಲವನ್ನು ನಿರೂಪಿಸಲಾರವು. ಅದಕ್ಕಾಗಿ ಜಂಗಮನು ವೇದಶಾಸ್ತ್ರಗಳಿಗೆ ಅತೀತನಾದವನು. ಆತನು ಚಿನ್ನಾದ-ಚಿದ್ಬಿಂದು ಚಿತ್ಕಲಾ ಸ್ವರೂಪನು, ಈ ನಾದಬಿಂದು ಕಳೆಗಳು ಪ್ರಣವದ ಅವಸ್ಥೆಗಳೆನ್ನಬಹುದು, ಅಕಾರ ಉಕಾರ ಮಕಾರಗಳು ಪ್ರಣವದ ಸ್ವರೂಪ. ಅಂಥ ಓಂಕಾರ ಸ್ವರೂಪನೆ ಜಂಗಮನು. ಇಂಥ ಜಂಗಮನಿಗೇನೇ ಭಕ್ತಾದಿ ಷಟ್‌ಸ್ಥಲಾಧಿಕಾರ ನೀಡುವ ಸಾಮರ್ಥ್ಯವುಂಟು. ಜಂಗಮನು ಈ ಆರು ಸ್ಥಲಗಳನ್ನು ಅಳವಡಿಸಿಕೊಂಡು ನಿತ್ಯ ನೈಜಾಚರಣೆಯನ್ನು ಗೈಯುತ್ತಾನೆ. ಗುರುವಿನ ಗುರು ಜಂಗಮನೆನಿಸಿದ್ದರಿಂದ ಬ್ರಹ್ಮಾದಿ ದೇವತೆಗಳಿಗೂ ಅಧಿಕನು. ಇಂಥ ಪಾವನಮೂರ್ತಿ ಜಂಗಮದೇವನ ಆರಾಧಕನಾದ ದಾಸೋಹಿಯಾದ ಭಕ್ತನೂ ಶ್ರೇಷ್ಠನು.

"ಪೂಜ್ಯ ಅಟವೀಸ್ವಾಮಿಗಳು ಸರಿಯಾಗಿ ಒಂದು ಶತಮಾನದ ಹಿಂದೆ ಲಿಂಗೈಕ್ಯರಾಗಿದ್ದರೂ, ಅವರ ಅಘಟಿತ ಮಹಿಮೆ ಇಂದಿಗೂ ವೇದ್ಯವಾಗುತ್ತಿದೆ. ಅವರ ಕೃಪಾಶೀರ್ವಾದದಿಂದಲೆ ಸಿದ್ಧಗಂಗಾ ಮಠದ ಮಹಾದಾಸೋಹ ನಿರಂತರ ನಡೆದಿದೆ. ಅವರು ಹೊತ್ತಿಸಿದ ದಾಸೋಹದ ಒಲೆ ಆರಿಲ್ಲ. ಅಲ್ಲದೆ, ತೊಟ್ಲು ಕೆರೆಯ ಮಠದಲ್ಲಿ ಪ್ರಕೃತಿ ನಿಯಮವನ್ನು ಸಹ ಅತಿಕ್ರಮಿಸಿದ ಸಂಗತಿ ತಿಳಿದುಬರುತ್ತದೆ. ಹನ್ನೆರಡು ತಿಂಗಳಲ್ಲಿಯೂ ಆ ಮಠದ ಬೃಹತ್ತಾದ ಮಾವಿನಗಿಡದಲ್ಲಿ ಮಾವಿನಕಾಯಿಗಳನ್ನು ನೋಡಬಹುದು. ಅದಕ್ಕಾಗಿಯೇ ಮೇಲೆ ವಿವರಿಸಿದಂತೆ ವೇದ-ಶಾಸ್ತ್ರ-ಆಗಮಗಳಿಗೆ ನಿಲುಕದ ಜಂಗಮನ ನಿಲವನ್ನು ಇಲ್ಲಿ ಕಾಣಬಹುದು. ಅಘಟಿತ ಘಟನೆ ಜಂಗಮನಿಂದ ನಡೆಯುತ್ತದೆ."

"ಅಟವೀಶರು ಸಿದ್ಧಯೋಗಿಗಳು ಮತ್ತು ಶಿವಯೋಗಿಗಳು. ನಿರಂತರ ತಪೋಮೂರ್ತಿಗಳಾದ ಅವರು ಜನರ ಲೌಕಿಕ ಬದುಕಿಗೆ ಆಧ್ಯಾತ್ಮದ ರಸಾಯನವನ್ನು ತುಂಬಿ ಚೇತನಿಸಿದ ಪುಣ್ಯಚರಿತರು. ಚಿಕ್ಕತೊಟ್ಲುಕೆರೆಯನ್ನು ಕ್ಷೇತ್ರವನ್ನಾಗಿ ಪರಿವರ್ತಿಸಿದ ಕಾರಣಿಕರು ಅವರು. ಅವರು ನಿಂತ ನೆಲವೇ ಪುಣ್ಯಕ್ಷೇತ್ರವಾಯಿತು. ಚರಿಸಿದ ಸ್ಥಳವೇ ಪಾವನಧಾಮವಾಯಿತು."



ಪ್ರಸಾದ ಸಿದ್ಧತೆಯನ್ನು ವೀಕ್ಷಿಸುತ್ತಿರುವ ಪೂಜ್ಯ ಶ್ರೀ ಶ್ರೀಗಳು

''ಅಟವೀಶರು ಬರೀ ಅಟವೀಶರಾಗಿ ಕಾಡಿನಲ್ಲಿ ತಪಗೈಯುತ್ತ ಕುಳಿತುಕೊಳ್ಳದೆ ನಾಡಲ್ಲಿ ಸಂಚರಿಸಿ ನಾಡಿಗರ ಹಿತಕ್ಕಾಗಿ ತಮ್ಮ ತಪಸ್ಸನ್ನು ಮತ್ತು ತೇಜಸ್ಸನ್ನು ಧಾರೆ ಎರೆದರು. ಲೋಕೋದ್ಧಾರ ಚರಿತರಾದ ಅವರು ವಸುಧೈವ ಕುಟುಂಬಕರಾಗಿ ನಾಡಿನಲ್ಲೆಲ್ಲ ಸಂಚರಿಸಿ ನಾಡಿಗರ ಹಿತಕ್ಕಾಗಿ ನಿರಂತರವಾಗಿ ಹಂಬಲಿಸಿದರು. ಸಾಂಸಾರಿಕ ತಾಪತ್ರಯಗಳಲ್ಲಿ ನೊಂದು ಬೆಂದು ಬಸವಳಿದ ಜನಗಳ ಬದುಕಿನ ಆಧಾರಸ್ತಂಭ ವಾಗಿ ನಿಂತು ಅವರಲ್ಲಿ ವಿಶ್ವಾಸದ ಉಸಿರನ್ನು ತುಂಬಿದರು''.

''ಮಹಾತ್ಮರು ಎಲ್ಲೋ ಹುಟ್ಟುತ್ತಾರೆ, ಎಲ್ಲೋ ತಪಿಸುತ್ತಾರೆ ಮತ್ತೆ ಎಲ್ಲೋ ಫಲಿಸುತ್ತಾರೆ. 'ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸಿ' ಎಂಬ ಮಾತು ಲೌಕಿಕರದು. ತಾವು ನಿಂತ ನೆಲ-ಜಲಗಳನ್ನೇ ಸ್ವರ್ಗವಾಗಿ ಪರಿವರ್ತಿಸುವವರು ಅಲೌಕಿಕರು. 'ಮಹಾತ್ಮಾಯತ್ರ ಚರತಿ, ಯತ್ರ ವಸತಿ ಭೂಮಿಸ್ತತ್ ಸ್ವರ್ಗಾದಪಿ ಗರೀಯಸಿ' ಎಂದು ಖಚಿತವಾಗಿ ಹೇಳಬಹುದು.''

''ಅಟವೀಶ ಶಿವಯೋಗಿಗಳು ತಪಸ್ಸಿನ ತವನಿಧಿ. ಪರಮಪೂಜ್ಯರು ಆತ್ಮೋದ್ಧಾರಕ್ಕಾಗಿ ತಪಗೈದರೂ ಸಹ ಅದನ್ನು ಲೋಕೋದ್ಧಾರಕ್ಕಾಗಿ ವಿತರಿಸಿದ ಮಹಾದಾಸೋಹಿಗಳು. 'ತಾನು ಗಳಿಸಿದ್ದನ್ನು ತಾನೇ ಉಂಬುವವನು ಮತ್ತು ಉಣ್ಣಬೇಕೆನ್ನುವವನು ಎಂದೂ ದಾಸೋಹಿಯಾಗಲಾರ. ತಾನು ಗಳಿಸಿದ್ದನ್ನು ವಿಶ್ವವೆಲ್ಲ ಉಣ್ಣಬೇಕು, ವಿಶ್ವಕ್ಕೆಲ್ಲ ಉಣಬಡಿಸಬೇಕು ಎಂದು ಬಯಸುವವನು ದಾಸೋಹಿ – ಮಹಾದಾಸೋಹಿ''.

''ಅಂಥ ಮಹಾದಾಸೋಹಿಗಳು ನಮ್ಮ ಅಟವೀಶ ಶಿವಯೋಗಿಗಳು''. ಶ್ರೀಗಳವರು ''ಭಾರತದಾದ್ಯಂತ ಸಂಚರಿಸಿ ಅಲ್ಲಲ್ಲಿ ತಮ್ಮ ಕುರುಹು ತೋರಿಸಿ ಭಕ್ತರಿಗೆ ಅರುಹುಮೂಡಿಸಿದ, ಗುರುಲಿಂಗಜಂಗಮರಿಗೆ ಭಕ್ತಿಜ್ಞಾನ ವೈರಾಗ್ಯದಿಂದ ದಾಸೋಹ ಮಾಡಿಸಿದ ದಾಸೋಹದ ಮಠಗಳ ಕುರುಹುಗಳು ನಮ್ಮ ಕರ್ನಾಟಕದಾದ್ಯಂತ ೩.೫೦ಕ್ಕೂ (ಮುನ್ನೂರಾ ಐವತ್ತಕ್ಕೂ) ಮೀರಿದ ಮಠಗಳು ಇರುತ್ತವೆ. ಉತ್ತರ ಕರ್ನಾಟಕದಲ್ಲಿ ಹೆಚ್ಚು ಕುರುಹುಗಳು ಇವೆ. ಮೈಸೂರು ಪ್ರಾಂತದಲ್ಲಿ ಗುಬ್ಬಿ ತೊರೆಮಠ, ಎಡೆಯೂರ ಸಿದ್ಧಲಿಂಗ ಶಿವಯೋಗಿಗಳು ಅನುಷ್ಠಾನಮಾಡಿದ ಸಿದ್ಧಗಂಗೆಯಲ್ಲಿ ದಾಸೋಹ ಮಠವನ್ನು ನಿರ್ಮಿಸಿ ನಿರಂತರವಾಗಿ ನಡೆಯುವ ಎರಡನೆ ಕಲ್ಯಾಣದಂತೆ ಮಾಡಿದವರು''. ಕ್ರಿ.ಶ. ೧೮೫೦ರಿಂದ ೧೯೦೦ರವರೆಗೆ ಅನೇಕ ಲೀಲೆಗಳನ್ನು ತೋರಿಸಿ ೧೯೦೧ರಲ್ಲಿ ಕಾರ್ತೀಕ ಶುದ್ಧ ದಶಮಿ ತಿಥಿಯಂದು ಚಿಕ್ಕತೊಟ್ಲುಕೆರೆ ಸುಕ್ಷೇತ್ರದಲ್ಲಿ ಶಿವಯೋಗ ಸಮಾಧಿಯಲ್ಲಿ ಲೀನರಾದರು.

(ಕೃಪೆ : ವಿವಿಧ ಮೂಲಗಳಿಂದ)

## ಶ್ರೀವಾಣಿ

ಲೋಕದಲ್ಲಿ ಅನೇಕ ಮಂದಿ ವಿವಾಹವಾಗುವುದರಿಂದ ತಮ್ಮ ಸಾಧನೆಯ ಏಕಾಗ್ರತೆಗೆ ಭಂಗಬರಹುದೆಂದು ಭಾವಿಸುತ್ತಾರೆ. ಅದು ಅವರ ತಪ್ಪು ತಿಳುವಳಿಕೆಯೆನ್ನಬಹುದು. ಏಕೆಂದರೆ, ವಿವಾಹದಿಂದ ಸಾಧನೆಯ ಏಕಾಗ್ರತೆಗೆ ಭಂಗಬರುವುದಾದರೆ, ಲೋಕದಲ್ಲಿ ಬಹುಮಂದಿ ಸಾಧಕರಿಗೆ ಸಿದ್ಧಿಯು ಸಾಧ್ಯವಿಲ್ಲವೆಂದಾಗುತ್ತದೆ. ಆದರೆ, ಅದೆಷ್ಟೋ ಮಂದಿ ವ್ಯಾವಹಾರಿಕ ಜಗತ್ತಿನ ಮಧ್ಯೆ ತಾವರೆಯ ಎಲೆಯ ಹನಿಯಂತೆ ಇದ್ದುಕೊಂಡು, ಎಲ್ಲಾ ವ್ಯವಹಾರಗಳನ್ನೂ ನೋಡಿಕೊಂಡು ಆತ್ಮ ಸಾಕ್ಷಾತ್ಕಾರ ಮಾಡಿಕೊಂಡ ಹಲವಾರು ನಿದರ್ಶನಗಳುಂಟು. ಅಲ್ಲದೆ ಆಧ್ಯಾತ್ಮಿಕ ಸಿದ್ಧಿಯಲ್ಲಿ ಗೃಹಸ್ಥ ಜೀವನಕ್ಕೆ ಮಹತ್ತರವಾದ ಸ್ಥಾನವಿದೆ. ಧರ್ಮವಿರುದ್ಧವಲ್ಲದ ರೀತಿಯಲ್ಲಿ ಅರ್ಥಕಾಮಗಳನ್ನು ಗಳಿಸಿಕೊಂಡು, ಲೋಕಹಿತಕ್ಕಾಗಿ ಅವುಗಳನ್ನು ಬಳಸಿಕೊಂಡು ತನ್ನನ್ನು ತಾನು ಅರ್ಪಿಸಿಕೊಳ್ಳುವವನೆ ನಿಜವಾದ ಸಾಧಕನು, ಸಿದ್ಧನು. ಅದರಂತೆ ಪವಿತ್ರ ವಿವಾಹದಿಂದ ಸಾಧಕನ ಸೇವಾಕಾರ್ಯಕ್ಷೇತ್ರವು ವಿಸ್ತಾರವಾಗಿ, ಅವನ ಸರ್ವಶಕ್ತಿಗಳ ವಿಕಾಸ ಮತ್ತು ಪ್ರಕಾಶಕ್ಕೆ ಒಳ್ಳೆಯ ಅವಕಾಶವಾಗುವುದು. ಈ ಕಾರಣ ವಿವಾಹದಿಂದ ಸಾಧನೆಯ ಏಕಾಗ್ರತೆಯ ಯಾವ ವಿಧವಾದ ಭಂಗವು ಬರುವುದಿಲ್ಲ; ಪರಂತು ಹೆಚ್ಚು ಅನುಕೂಲವಾಗುವುದು.

★





# ಸಿದ್ಧಗಂಗೆ ಭಾಗ್ಯ ಭಾಸ್ಕರ ಶ್ರೀ ಉದ್ದಾನ ಮಹಾಸ್ವಾಮಿಗಳು

– ಹೆಚ್.ವಿ. ವೀರಭದ್ರಯ್ಯ

ಸಿದ್ಧಗಂಗೆಯ ಗುರುಪರಂಪರೆಗೆ ಘನತೆಯ ಗಂಧವಿಟ್ಟವರು ! ಪಾವಿತ್ರ್ಯತೆಯ ಪಾವುಡ ಉಡಿಸಿದವರು ! ಶಿವಯೋಗಕ್ಕೆ ನೀಲಾಂಜನವೆನಿಸಿದವರು! ಶಿಕ್ಷಣ ದಾಸೋಹಕ್ಕೆ ದಾರ್ಶನಿಕ ರೂವಾರಿಯಾದವರು ! ಅವರು ಹೆಚ್ಚು ಓದಿದವರಲ್ಲ! ಲೋಕವನ್ನು ಹೆಚ್ಚು ಓದಿಸಿದವರು! ಮೇಕೆಗಳನ್ನು ಕಾಯ್ದವರು! ಮುಕ್ತಲೋಕದ ಚಿಂತನೆ ನಡೆಸಿದವರು! ಮೇಕೆಗಳಿಂದ ಬಾಳಿನ ಅರ್ಥ ಕಂಡುಕೊಂಡವರು! ಎಲ್ಲ ಸೊಪ್ಪು ಸದೆಗಳನ್ನು ತಿಂದು ಸತ್ವಭರಿತ ಹಾಲನ್ನು ಕೊಡುವ ಆಡಿನಂತೆ ಲೋಕಕ್ಕೆ ಹಾಲುಣಿಸಿದವರು! ಲೋಕದಾಟವನ್ನು ಆಡಿದರು! ಹಾಡಿದರು ಆನಂದವಾಗಿ! ಜೀವನವೆಂಬುದು ಅವರಿಗೊಂದು ಆಟವಾಯಿತು! ಕಾಠಿಣ್ಯ-ಕಾರುಣ್ಯಗಳ ಸಂಗಮವಾಗಿದ್ದವರು! 'ಲೋಕ ವಿರೋಧಿ ಶರಣನಾರಿಗಂಜ' ಎಂಬ ನುಡಿಗೆ ಸುಳಿವ ಶಾಸನವಾದರು! ಲಕ್ಕೂರ ಲಾವಣ್ಯ ಸಿದ್ಧಗಂಗೆಯ ಸಿರಿಯಾಯಿತು! ಹಿರಿದಾಯಿತು! ಅದೊಂದು ಭಾಗ್ಯವಿಶೇಷ! ಹರಸಿ ಆಶೀರ್ವದಿಸಿದ ಗುರುವೇ ನಿಬ್ಬೆರಗಾಗುವಂತೆ ಎದ್ದು ನಿಂತ ಅಚ್ಚರಿ! ನಿಜಗಲ್ ಗಿರಿಯೇ ಪುರುಷರೂಪಿನಿಂದ ನಡೆದು ಬಂದ ಅಮೃತಘಳಿಗೆ! ಮಾನವೀಯತೆ ಅರಳಿದ ಸಿದ್ಧಿ ಸೊಬಗು! ಎತ್ತರದ ನಿಲವು! ಎತ್ತರದ ಚಿಂತನೆ! ಎತ್ತರದ ಮನಸ್ಸು! ಶ್ರೀ ಶಿವಕುಮಾರ ಪ್ರಭುವನ್ನು ಲೋಕಸೇವೆಗೆ ತಿದ್ದಿ ತೀಡಿ ಆಶೀರ್ವದಿಸಿದ ದಾರ್ಶನಿಕ ಧೀರವೀರವೈರಾಗ್ಯವಿಭು ಶ್ರೀ ಉದ್ದಾನ ಶಿವಯೋಗಿ.



ಪೂಜ್ಯ ಶ್ರೀ ಉದ್ದಾನಸ್ವಾಮಿಗಳು ಶ್ರೀ ಸಿದ್ಧಗಂಗಾ ಮಠದ ಚರಿತ್ರೆಯಲ್ಲಿ ಪ್ರಜ್ವಲಿಸುತ್ತಿರುವ ಪುಟ ಬಂಗಾರ. ''ಲಕ್ಕೂರಿನಲ್ಲಿ ಕ್ರಿ.ಶ. ಸುಮಾರು ೧೮೬೦ರ ಹೊತ್ತಿನಲ್ಲಿ ಹುಟ್ಟಿ ಇಲ್ಲಿ ಬಾಲ್ಯಜೀವನ ನಟಿಸಿ, ಸಿದ್ಧಗಂಗಾ ಕ್ಷೇತ್ರಾಧಿಪತಿಗಳಾಗಿ ಅಘಟಿತ ಘಟನಾ ಪರಂಪರೆಗಳನ್ನು ಮೆರೆದು ಸಿದ್ಧಗಂಗಾ ಪುಣ್ಯ ಭೂಮಿಯಲ್ಲಿ ಸರ್ವಲೋಕೋಪಕಾರದ ಮಹಾದಾಸೋಹವನ್ನು ಆಚರಿಸಿ ೧೯೪೧ರಲ್ಲಿ (೧೧.೧.೧೯೪೧) ಲಿಂಗೈಕ್ಯರಾದ ಶ್ರೀ ಮದುದ್ದಾನ ಶಿವಯೋಗಿಗಳು'' ಮಹಾನುಭಾವರು. ಶ್ರೀಮಠದ ಇಂದಿನ ಎಲ್ಲ ದಾಸೋಹ ಕೈಂಕರ್ಯಗಳಿಗೆ ಅಂಕುರಾರ್ಪಣ ಮಾಡಿದ ಅಪೂರ್ವ ಪುಣ್ಯಚರಿತರು. ಶ್ರೀಗಳವರಿಂದ ಶ್ರೀಮಠದ ಯಶೋವೈಭವ ದಿಗಂತ ವಿಸ್ತಾರವಾಗುವಂತಾಯಿತು.

''ಲಕ್ಕೂರಿನ ರುದ್ರಪ್ಪನು ಅಡವಿ ಸ್ವಾಮಿಗಳವರ ಪ್ರಬಲಾಕರ್ಷಣೆಗೊಳಗಾಗಿ ಮಠಕ್ಕೆ ಬಂದುದೇ ತಡ ಅಡವೀಶ್ವರರಿಗೆ ಸಹಸ್ರ ಬಾಹುಬಲ ಬಂದಂತಾಯಿತು. ಸಹಸ್ರ ಕಿರಣಗಳನ್ನು ದಿಗ್ದಿಗಂತಗಳಿಗೆ ಚಾಚಿ ಉದಯಗೊಳ್ಳುವ ಹೊಂಗದಿರನ ಕಾಂತಿಯ ಶ್ರೀಕ್ಷೇತ್ರೋದಯದ ಮರೀಚಿ ಮಾಲೆಯಂತಾಯಿತು. ರುದ್ರಪ್ಪ ಶ್ರೀಕ್ಷೇತ್ರಕ್ಕೆ ಸಿದ್ಧನಾಗಿ ಬಂದಿದ್ದನೇ? ಸಿದ್ಧಪುರುಷನಾಗಿ ಬಂದಿದ್ದನೇ? ಸಿದ್ಧಿಗಾಗಿ ಬಂದರು. ಸಿದ್ಧಪುರುಷರಾಗಿ ಬಂದರು, ಎರಡೂ ಬಿಡಿಸಲಾರದ ಕಗ್ಗಂಟು. ಸಿದ್ಧಗಂಗೆಗೆ ಲಕ್ಕೂರಿನ ರುದ್ರಪ್ಪ ಅದೆಷ್ಟೋ ಸಲ ಬಂದಿದ್ದ. ತನ್ನೂರಿನಿಂದಲೇ ಪಶ್ಚಿಮ ದಿಗಂತದಲ್ಲಿ ಬೂದು ಬೂದು ಬಣ್ಣದಿಂದ ಕಾಣುವ ಸಿದ್ಧಗಂಗಾ ಬೆಟ್ಟವನ್ನು ಬಾಲ್ಯದಿಂದ ನೋಡಿ ಕೈಯೆತ್ತಿ ಮುಗಿಯುತ್ತಿದ್ದನು. ಸಿದ್ಧಗಂಗಾ ಕ್ಷೇತ್ರವೆಂಬ ಸಮುದ್ರದ ಉಪ್ಪು, ಲಕ್ಕೂರಿನ ಬೆಟ್ಟದ ನೆಲ್ಲಿಕಾಯಿ ಅಡವಿ ಸ್ವಾಮಿಗಳರ ದಿವ್ಯ ಶಿವಯೋಗಶಕ್ತಿಯ ಫಲವಾಗಿ ಎರಡೂ ಒಂದಾದವು. ಸಿದ್ಧಗಂಗೆಯ ಭಾಗ್ಯದ ಬಾಗಿಲು ತೆರೆಯಿತು. ಭಕ್ತರ ಭಕ್ತಿ ಜೀವನಕ್ಕೆ ಕಳೆಯೇರಿತು. ರುದ್ರಪ್ಪ 'ಉದ್ದಾನ ಶಿವಯೋಗಿ' ಎಂಬ ನೂತನಾಭಿದಾನ

ವಿದ್ಯಾರ್ಥಿಗಳಿಗೆ ನಿತ್ಯ ದಾಸೋಹ ವೀಕ್ಷಣೆಯಲ್ಲಿ ಪೂಜ್ಯ ಶ್ರೀ ಶ್ರೀಗಳು

ದಾಸೋಹ : ಒಂದು ನೋಟ

ವರ್ಗಭೇದವಿಲ್ಲದ ಸಂಸ್ಕೃತ ಶಿಕ್ಷಣ ನೀಡುತ್ತಿರುವ
ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಕಾಲೇಜು

## ಯತಿ-ಪುಂಗವ

ಪೊಡಮಡುವೆ ನಾ ನಿಮಗೆ ಉದ್ದಾನ - ಶಿವಯೋಗಿ
ಅಡವೀಶ ಗುರು-ಶಿಷ್ಯ ಪರಮ ಗುರುವೆ ॥ ಪಲ್ಲವಿ ॥

ಲಕ್ಕೂರಿನಲಿ ಜನಿಸಿ ಪಶುಪಾಲನೆಯಗೈದು
ಅಕ್ಕರಿಂದಲಿ ನೀವು 'ವಿಶ್ವಗುರು'ವೆನಿಸಿದಿರಿ
ಉಕ್ಕಿನಂತಹ ಗಡಸು ಪಕ್ಕದಲೆ ಮೃದುತನವು
ಕಕ್ಕುಲತೆಯಿಂ ಸಿದ್ಧಗಂಗೆಯನು ಸೇರಿದಿರಿ

ಎನಿತೊ ಜನ್ಮದ ಪುಣ್ಯ ಅಟವೀಶನಾ ಸೇವೆ
ಕನಿಕರಿಸಿ ಗುರು ನಿಮಗೆ ಆಶ್ರಮವನೀಯೆ
ಇನ ಶಶಿಗಳಿರುವನಕ ನಿಮ್ಮ ಪೆಸರಿರುತಿಹುದು
ಘನತೆ ತುಂಬಿದಿರಲ್ಲ ಶ್ರೀಕ್ಷೇತ್ರಕೆ

ಜಾತಿಯನು ಗಣಿಸದೆಯೆ ಎಲ್ಲರನು ಕರೆಕರೆದು
ನೀತಿ ತುಂಬುವ ಭಾಷೆ ಸಂಸ್ಕೃತವ ಕಲಿಸಿದಿರಿ
ಮಾತುಗಳೆ ಇಲ್ಲೆನಗೆ ತವಮಹಿಮೆ ಬಣ್ಣಿಸಲು
ಮಾತಿಗೇ ಮಿಗಿಲು ದಾಸೋಹವನು ನಡೆಸಿದಿರಿ

ಬ್ರಹ್ಮರಾಕ್ಷಸನನ್ನು ಸುಮ್ಮನಾಗಿರಿಸಿದಿರಿ
ಬ್ರಹ್ಮ ಸಮ ಗುರುವಿನಾ ಬಲವನ್ನು ಗಳಿಸಿದಿರಿ
ಬ್ರಹ್ಮವಿದ್ಯೆಯನೆಲ್ಲ ಶಿಷ್ಯರಿಗೆ ಹೇಳಿದಿರಿ
ಬ್ರಹ್ಮ-ಶಿವಕುವರರ 'ಶ್ರೀಗುರು'ವ ಮಾಡಿದಿರಿ

ಮಠದ ಭವಿಷ್ಯವನು ಕಂಡು ಹಿರಿಹಿಗ್ಗಿದಿರಿ
ಕಠ-ಉಪನಿಷದನ್ನು ಸಹಜವೆಂದೆನಿಸಿದಿರಿ
ಮಠದ ಕಾರ್ಯಗಳನ್ನು ಜಗಕೆ ವಿಸ್ತರಿಸಿದಿರಿ
ಮಠಪತಿಗಳೆಲ್ಲರಿಗೆ ಮನದುಂಬಿ ಹರಸಿದಿರಿ

ನಮ್ಮ ಗುರುಗಳು ನಿಮ್ಮನನವರತ ನೆನೆಯುವರು
ಸೊಮ್ಮೆಲ್ಲ ನಿಮದೆಂದೆ ಆಗಾಗ ನುಡಿಯುವರು
ಕಮ್ಮಗೋಲನ ವೈರಿ ಕೃಪೆಗೆ ಪಕ್ಕಾದವರ
ಒಮ್ಮೆಯಾದರೂ ನುಡಿಸಿ 'ಯತಿ-ಪುಂಗವ'.

– 'ಪುಲಿಕೇಶಿ'
(ಲಿಂ. ಪಂಡಿತ್ ಕೆ.ಪಿ. ಶಿವಲಿಂಗಯ್ಯ)





ದಿಂದ ಹರದನಹಳ್ಳಿ ಪೀಠಾಚಾರ್ಯರ ಪ್ರಾಚೀನ ತಪೋಭೂಮಿಯಾದ ಶ್ರೀ ಸಿದ್ಧಗಂಗಾಧಿಪತ್ಯವನ್ನು ವಹಿಸಿದನು.''

''ಗುರುಕಾರುಣ್ಯ ಬಲದಿಂದ ಲಭ್ಯವಾದ ಸಿದ್ಧಗಂಗಾ ಮಠದ ಅಧಿಕಾರ ವಹಿಸಿಕೊಂಡರು. ಆರ್ಥಿಕವಾಗಿ ಮಠ ಬಡವಾದ ಕಾರಣ ಉದ್ದಾನಪ್ಪನವರಿಗೆ ದಿಕ್ಕು ತೋಚದಂತಾಗಿ ಹೋಯಿತು. ಒಂದು ದಿನ ಕನಸಿನಲ್ಲಿ ಅಡವೀ ಸ್ವಾಮಿಗಳು ಕಾಣಿಸಿಕೊಂಡು ''ಮಗನೇ ಅಂಜಬೇಡ, ಮಠದಲ್ಲಿ ನನ್ನ ಗದ್ದುಗೆ ಕಟ್ಟಿಸು ಹಣವನ್ನು ನಾವೇ ಕೊಡುತ್ತೇವೆ'' – ಎಂದು ಹೇಳಿದಂತಾಯಿತು. ಮರುದಿನವೇ ಇದ್ದಬದ್ದ ಕೆಲವು ಸಾಮಗ್ರಿಗಳನ್ನು ಜೋಡಿಸಿಕೊಂಡು ಸ್ವತಃ ತಾವೇ ಗುದ್ದಲಿ ಹಿಡಿದು ಪಾಯಕ್ಕಾಗಿ ನೆಲ ಅಗಿಯತೊಡಗಿದರು. ಅಷ್ಟರಲ್ಲಿಯೆ ಅನಿರೀಕ್ಷಿತವಾಗಿ ಆಂಧ್ರಪ್ರದೇಶದ ಓರ್ವ ರೆಡ್ಡಿಯು ಬಂದು ನಮಸ್ಕರಿಸಿ ''ಸ್ವಾಮಿಯ ಕೃಪೆಯಿಂದ ನನ್ನ ವಂಶೋದ್ಧಾರ ಮಾಡುವ ಗಂಡು ಮಗನು ನನಗೆ ಹುಟ್ಟಿದ್ದಾನೆ. ನನ್ನ ಈ ಹರಕೆಯ ಕಾಣಿಕೆಯನ್ನು ಒಪ್ಪಿಸಿಕೊಳ್ಳಿ'' ಎಂದು ಹಮ್ಮಣಿಯನ್ನು ಅವರ ಮುಂದಿಟ್ಟು ನಮಸ್ಕರಿಸಿದ. ಈ ಘಟನೆಯಿಂದ ಸ್ವಾಮಿಗಳು ಉತ್ತೇಜಿತರಾಗಿ ಸ್ವಾಮಿಯ ಕೃಪೆ ಪ್ರಾರಂಭವಾಯಿತು; ಇನ್ನು ಅಂಜಿಕೆಯಿಲ್ಲ ಎಂದುಕೊಂಡು ಅಡವೀ ಸ್ವಾಮಿಗಳ ಸಂಕಲ್ಪಗಳನ್ನೆಲ್ಲ ಕಾರ್ಯರೂಪಕ್ಕೆ ತರುವ ಕ್ರಿಯಾಶಕ್ತಿಯನ್ನು ಮೆರೆದರು. ವಿದ್ಯಾನಿಲಯಗಳು, ವಿದ್ಯಾರ್ಥಿನಿಲಯಗಳು, ಬಾವಿಗಳು, ಕಲ್ಯಾಣಿಗಳು, ದಾಸೋಹ ಗೃಹಗಳು ಒಂದಾದ ಮೇಲೊಂದರಂತೆ ಶ್ರೀ ಕ್ಷೇತ್ರದಲ್ಲಿ ಮೇಲೆದ್ದವು. ಶಿವಶರಣರ ಇಚ್ಛೆಯನ್ನು ಶಿವನೂ ಮೀರಲಾರ ಎಂಬ ನುಡಿ ಸತ್ಯವಾಗತೊಡಗಿತು''.

ಶಾಪಾನುಗ್ರಹಶಕ್ತಿ ಸಮನ್ವಿತರಾದ ಶ್ರೀ ಉದ್ದಾನ ಶಿವಯೋಗಿಗಳು ಗ್ರಾಮೀಣ ಜನತೆಯ ಉದ್ಧಾರವನ್ನೇ ಜೀವಿತದ ಧ್ಯೇಯವಾಗಿಸಿಕೊಂಡರು. ಜಾತಿಮತ ಪಂಥಗಳನ್ನು ಲೆಕ್ಕಿಸಲಿಲ್ಲ. ಸಂಸ್ಕೃತಾಭ್ಯಾಸಕ್ಕಾಗಿ ಸಂಸ್ಕೃತ ಪಾಠಶಾಲೆಯನ್ನು ೧೯೧೭ರಷ್ಟು ಹಿಂದೇ ತೆರೆದರು. ಎಲ್ಲ ಸಮಾಜದ ಮಕ್ಕಳೂ ಸಂಸ್ಕೃತ ಕಲಿಯಲು ಮುಕ್ತಾವಕಾಶ ಕಲ್ಪಿಸಿದರು. ಶ್ರೀಮಠದಲ್ಲಿ ಜಾತ್ರೆಯನ್ನು ಪ್ರಾರಂಭಿಸಿದರು. ಕ್ರಿಯಾಶಕ್ತಿಗೆ, ಹಸ್ತಶುದ್ಧಿಗೆ, ಆಚಾರವಿಚಾರಗಳಿಗೆ ಯೌಗಿಕ ಪುರುಷರಾದರು. ಶ್ರೀ ಶಿವಕುಮಾರ ಸ್ವಾಮಿಗಳನ್ನು ಶ್ರೀಮಠದ ಕಾರಣಿಕ ಪುರುಷರಾಗುವಂತೆ ಆಶೀರ್ವದಿಸಿ ಲಿಂಗದೊಳಗಾದರು. ಶ್ರೀಮಠದ ಇತಿಹಾಸದಲ್ಲಿ ನೆನಪಿನ ನಂದಾದೀಪವಾಗಿ ಬೆಳಗುತ್ತಿದ್ದಾರೆ ಇಂದಿಗೂ ಸಹ.

★

## ಶ್ರದ್ಧಾಂಜಲಿ

## ಮೈಸೂರು ಮಲ್ಲಿಗೆ ಕಂಪನ್ನು ಬಿಟ್ಟುಹೋದ ಶ್ರೀ ಕೆ.ಎಸ್. ನರಸಿಂಹಸ್ವಾಮಿ ಅವರು

'ಮೈಸೂರು ಮಲ್ಲಿಗೆ' ಕವನ ಸಂಕಲನದ ಮೂಲಕ ಜನಪ್ರಿಯರಾಗಿದ್ದ ನಾಡಿನ ಹಿರಿಯ ಕವಿ ಶ್ರೀ ಕೆ.ಎಸ್. ನರಸಿಂಹಸ್ವಾಮಿ ಅವರು ಡಿಸೆಂಬರ್ ೨೮ರಂದು ನಿಧನರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಎಂಬತ್ತೆಂಟು ವಸಂತಗಳನ್ನು ಕಂಡ ಶ್ರೀ ನರಸಿಂಹಸ್ವಾಮಿಯವರು ತುಂಬು ಜೀವನ ನಡೆಸಿದರು. ತಮ್ಮ ಕವನಗಳ ಮೂಲಕ ಜನಮದಲ್ಲಿ ಚಿರಾಯುವಾಗಿ ಉಳಿದ ಪ್ರೇಮಕವಿ.

'ಕಬ್ಬಿಗರ ಕೂಗು' ಮೊದಲ ಕವನ ಸಂಕಲನದ ಮೂಲಕ ಕಾವ್ಯಕ್ಷೇತ್ರವನ್ನು ಪ್ರವೇಶಿಸಿದ ಶ್ರೀ ನರಸಿಂಹಸ್ವಾಮಿ ಅವರು ಮೈಸೂರು ಮಲ್ಲಿಗೆ, ಐರಾವತ, ದೀಪದ ಮಲ್ಲಿ, ಉಂಗುರ, ಇರುವಂತಿಗೆ, ಶಿಲಾಲತೆ, ಸಂಜೆಹಾಡು, ದೀಪದ ಸಾಲಿನ ನಡುವೆ'ಯೂ ಸೇರಿದಂತೆ ೧೭ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಮೈಸೂರು ಮಲ್ಲಿಗೆ ಕವನ ಸಂಕಲನ ಅವರನ್ನು ಜನಪ್ರಿಯತೆಯ ಉತ್ತುಂಗ ಶಿಖರಕ್ಕೇರಿಸಿತು. ವೃತ್ತಿಯಲ್ಲಿ ಸರ್ಕಾರಿ ಸೇವೆಯಲ್ಲಿದ್ದ ಶ್ರೀ ಕೆ.ಎಸ್. ನರಸಿಂಹಸ್ವಾಮಿ ಅವರು ಪ್ರವೃತ್ತಿಯಲ್ಲಿ ಸಾಹಿತ್ಯ ಆರಾಧಕರಾಗಿದ್ದರು.

ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಮೈಸೂರಿನಲ್ಲಿ ೧೯೯೦ರಲ್ಲಿ ನಡೆದ ೬೦ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಗೌರವ, ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್, ಕರ್ನಾಟಕ ಸರ್ಕಾರದ ಪ್ರತಿಷ್ಠಿತ 'ಪಂಪ ಪ್ರಶಸ್ತಿ', ಅವರ ಕಾವ್ಯ ಪ್ರತಿಭೆಗೆ ಸಂದ ಗೌರವ ಪ್ರಶಸ್ತಿಗಳು.

ಶ್ರೀ ಕೆ.ಎಸ್. ನರಸಿಂಹಸ್ವಾಮಿ ಅವರ ನಿಧನ ಕಾವ್ಯಲೋಕಕ್ಕೆ ಭರಿಸಲಾರದ ನಷ್ಟ. ಅವರ ಆತ್ಮಕ್ಕೆ ದಯಾಮಯನಾದ ಭಗವಂತನು ಚಿರಶಾಂತಿಯನ್ನು ನೀಡಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.



## ವಚನಗಳ ವಿಶ್ಲೇಷಣೆ

– ಸಂ. ಡಾ. ಎಲ್. ಬಸವರಾಜು
ವಿಶ್ರಾಂತ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು.

*ನೆಲನೊಂದೇ ಹೊಲೆಗೇರಿ ಶಿವಾಲಯಕ್ಕೆ !*
*ಜಲವೊಂದೇ ಶೌಚಾಚಮನಕ್ಕೆ !*
*ಕುಲವೊಂದೇ ತನ್ನ ತಾನರಿದವಂಗೆ !*
*ಫಲವೊಂದೇ ಷಡುದರ್ಶನಮುಕ್ತಿಗೆ !*
*ನಿಲವೊಂದೇ, ಕೂಡಲಸಂಗಮದೇವ,*
*ನಿಮ್ಮನರಿದವಂಗೆ !*

ಉತ್ತಮ ಅಥವಾ ಅಧಮ ಆಚರಣೆಗಳ ಆಧಾರದಿಂದಲ್ಲದೆ ಹೇಗೂ ಯಾರನ್ನಾಗಲಿ ಉತ್ತಮ-ಅಧಮನೆಂದು ನಿರ್ಣಯಿಸಲಾಗದು. ಒಂದೇ ನೆಲವಾದರೂ ಅಲ್ಲಿ ಶಿವಾಲಯವನ್ನ ಕಟ್ಟಿದರೆ ಪುಣ್ಯಕ್ಷೇತ್ರವಾಗಿ, ದುರಾಚಾರಿಗಳು ನೆಲೆಸಿದರೆ ಹೊಲೆಗೇರಿಯಾಗುವುದು. ಹಾಗೆಯೇ ಒಂದೇ ಜಲವು–ಮೀಯಲು ಕುಡಿಯಲು ಬಳಕೆಯಾದರೆ ತೀರ್ಥವೆನಿಸಿ, ಶೌಚಕ್ಕೆ ಬಳಕೆಯಾದರೆ ಕೊಳಕೆನಿಸುವುದು. ಈ ನೆಲ-ಜಲಗಳಂತೆ ಒಂದೇ ಮಾನವಕುಲವು ಜ್ಞಾನದಿಂದ ಉತ್ತಮವೆನಿಸಿ, ಅಜ್ಞಾನದಿಂದ ಅಧಮವೆನಿಸುವುದಲ್ಲದೆ, ಯಾವುದಾದರೊಂದು ಕುಲದಲ್ಲಿ ಹುಟ್ಟಿದ ಮಾತ್ರದಿಂದಲೇ ಪಾವನವಾಗಲಿ ಪಾಪಿಯಾಗಲಿ ಆಗುವುದು ಸಾಧ್ಯವಿಲ್ಲ. ಮತ್ತು ಜ್ಞಾನಿಯಾದವನಿಗೆ ಸಮದರ್ಶಿತ್ವವಿರುವುದರಿಂದ ಕುಲ(ಜಾತಿ)ಗಳಲ್ಲಿ ಇದು ಮೇಲು ಅದು ಕೀಳೆನ್ನುವುದಿಲ್ಲದೆ – ಎಲ್ಲ ಕುಲ(ಜಾತಿ) ಗಳೂ ಅವನಿಂದ ಸಮಾನವಾಗಿ ಸನ್ಮಾನಿಸಲ್ಪಡುವವು. ಬೇರೆ ಬೇರೆ ಕುಲಕ್ಕೆ ಬೇರೆ ಬೇರೆ ದರ್ಶನ-ಸಿದ್ಧಾಂತವಿರಬಹುದು, ಆದರೆ ಎಲ್ಲ ದರ್ಶನಗಳ ಗುರಿಯೂ ಮುಕ್ತಿಯೇ ಆಗಿರುವುದು. ಕೊನೆಯದಾಗಿ ದೇವರ ಉಪಾಸನೆಯಿಂದ ಉದ್ಧಾರವಾದ ಎಲ್ಲ ಮುಕ್ತಾತ್ಮರ ಆನಂದಸ್ಥಿತಿಯೂ ಒಂದೇ ಆಗಿರುವುದು.

ಹೀಗಿರುವಲ್ಲಿ ಜಾತಿಗಳ ಆಧಾರದ ಮೇಲಿಂದ ಜನರನ್ನು ಮೇಲು ಕೀಳೆಂದು ವಿಂಗಡಿಸುವ ದುಷ್ಟ ಪದ್ಧತಿಯನ್ನು ಬಸವಣ್ಣನವರು ಖಂಡಿಸಿ, ಕುಲವು ಕುಲವಲ್ಲ, ಸದಾಚಾರವೇ ಕುಲವೆಂದು ಮತ್ತೆ ಮತ್ತೆ ಸಾರಿರುವರು.

''ಅರಿತರೆ ಶರಣ, ಮರೆತರೆ ಮಾನವ'' ಎಂಬ ಬಸವಣ್ಣನವರ ಮಾತು ಕಾಲ-ದೇಶ-ಜಾತಿ-ಭೇದವಿಲ್ಲದೆ ಎಲ್ಲ ಮಾನವವರ್ಗಕ್ಕೂ ಇಡಿಯಾಗಿ ಅನ್ವಯಿಸುವ ಸುವರ್ಣಸೂತ್ರ.

*ಹಬ್ಬಕ್ಕೆ ತಂದ ಹರಕೆಯ ಕುರಿ*
*ತೋರಣಕ್ಕೆ ತಂದ ತಳಿರ ಮೇಯಿತ್ತು !*
*ಕೊಂದಹರೆಂಬುದನರಿಯದೆ*
*ಬೆಂದೊಡಲ ಹೊರೆವುತ್ತಲಿದೆ !*
*ಅದಂದೆ ಹುಟ್ಟಿತ್ತು ! ಅದಂದೆ ಹೊಂದಿತ್ತು !!*
*ಕೊಂದವರುಳಿವರೆ ಕೂಡಲಸಂಗಮದೇವ?!*

ಜನ ತಮ್ಮ ಹಬ್ಬ ಹರಿದಿನಕ್ಕೆಂದು ಕುರಿ-ಮೇಕೆಗಳನ್ನು ಬಲಿ ಕೊಡುವ ಕೃತ್ಯದಲ್ಲಿ ಬಸವಣ್ಣನವರಿಗೆ ಇಡೀ ಮಾನವಕೋಟಿಯು ಯಮನ ಮನೆಯ ಹಬ್ಬಕ್ಕೆ ಬಲಿಯಾಗುತ್ತಿರುವ ವಿಚಿತ್ರ ಕಣ್ಣಿಗೆ ಕಟ್ಟಿತು.

ಯಾರದೋ ಹಬ್ಬಕ್ಕೆ, ಯಾರೋ ಬಲಿ ! ಕೊನೆಗೆ ಸಾವಿಗೆ ಸರ್ವರೂ ಬಲಿ ! ಹೀಗಿದ್ದರೂ ಈ ಜೀವನದ ನಶ್ವರತೆಯನ್ನು ಮನಗಾಣದೆ ಜನ ತಮ್ಮ ಸ್ವಂತ ಸುಖಭೋಗಕ್ಕಾಗಿ ಅನ್ಯಜೀವಜಾಲವನ್ನು ಬಳಸಿ, ಅವನ್ನು ಬಲಿ ತೆಗೆದುಕೊಳ್ಳುತ್ತ ತಮ್ಮ ಲಂಪಟತನದ ರಭಸವನ್ನು ಉಕ್ಕೇರಿಸುತ್ತಲೇ ಬಂದಿರುವರು.

ಹಬ್ಬಕ್ಕಾಗಿ ತಂದ ಹರಕೆಯ ಕುರಿ, ಇನ್ನೊಂದು ಘಳಿಗೆಗೆ ತನ್ನನ್ನು ಕೊಲ್ಲುವರೆಂಬುದನ್ನು ಅರಿಯದೆ, ತನ್ನೊತ್ತಿನಲ್ಲೇ ನಳನಳಿಸುವ ತೋರಣದ ತಳಿರನ್ನು ಎಳೆದು ಮೆಲ್ಲುತ್ತಿರುವುದು ! ಆ ಘಳಿಗೆಯಲ್ಲೇ, ಅತ್ತ, ಜನ ಅದರ ಕೊರಳನ್ನು ಕೊಯ್ಯಲು ಚೂರಿಯನ್ನು ಕಲ್ಲಿಗೆ ತಿಕ್ಕಿ ಹರಿತ ಮಾಡುತ್ತಿರುವರು! ಆ ಚೂರಿ ಅದರ ನುಣ್ಗೊರಲ ಮೇಲೂರಿ ಕೆನ್ನೆತ್ತರನ್ನು ಚಿಮ್ಮಿಸುವುದು ಇನ್ನೊಂದು ಕ್ಷಣವೋ ಅರೆಕ್ಷಣವೊ! ಆದರೂ ಅದು ಅಲ್ಲಿಂದ ಪಾರಾಗುವತ್ತ ಯೋಜನೆ ತಿರುಗಿಸಲಾರದೆ, ಚಿಗುರು ಹೂವುಗಳತ್ತಲೇ ದತ್ತಾವಧಾನವಾಗಿ ಮೈಮರೆತಿರುವುದು.

ಈ ಮಾನವನಾದರೂ ಆ ಕುರಿಗಿಂತ ಹೇಗೂ ಮೇಲೆಂದು ತೋರುವುದಿಲ್ಲ. ಅವನು ಜೀವನದ ಲಾಲಸೆಗಳತ್ತ ಮನ ತೆತ್ತು ಆತ್ಮೋದ್ಧಾರದ ಯೋಜನೆಯನ್ನು ಮನದತ್ತ ತರಲಾರದವನಾಗಿರುವನು. ಹೆಡತಲೆಯ ಸಾವು ಅವನನ್ನು ಇಂದೋ ಈಗಲೋ ತನ್ನ ವಿಲಯಪರ್ವಕ್ಕಾಗಿ ಕೊಲ್ಲಲು ಅಣಿಮಾಡಿಕೊಳ್ಳುತ್ತಿರುವುದು !

ಈ ವಚನದಲ್ಲಿ ಬಸವಣ್ಣನವರು, ಮೊದಲನೆಯದಾಗಿ, ಮಾನವ ಇಹಸುಖಕ್ಕೆ ಸೋತು ಅಧ್ಯಾತ್ಮ ಭಾಗ್ಯದಿಂದ ವಂಚಿತನಾಗುತ್ತಿರುವನೆಂದೂ; ಎರಡನೆಯದಾಗಿ, ತಾನೇ ಸಾವಿನ ಹಬ್ಬಕ್ಕೆ ಹರಕೆಯ ಕುರಿಯಾಗಿರುವಾಗ, ಅವನು ಮತ್ತೆ ತನ್ನ ಹಬ್ಬಕ್ಕೆಂದು ಕುರಿ ಮುಂತಾದುವನ್ನು ಬಲಿಕೊಡುತ್ತಿರುವುದು ಸೋಜಿಗವೆಂದೂ ಸುಯ್ಗರೆದಿರುವರು.

*(ಮಾತು) ಮಾತಿಂಗೆ ನಿನ್ನ ಕೊಂದಹರೆಂದು*
*ಅಳು ಕಂಡಾ, ಎಲೆ ಹೋತೇ !*
*ವೇದವನೋದಿದವರ ಮುಂದೆ ಅಳು ಕಂಡಾ ಹೋತೇ*
*ಶಾಸ್ತ್ರವನೋದಿದವರ ಮುಂದೆ ಅಳು ಕಂಡಾ !*
*ನೀನೆತ್ತುದಕೆ ತಕ್ಕುದ ಮಾಡುವ ಕೂಡಲಸಂಗಮದೇವ*

ಅಶಿಕ್ಷಿತ ನಾಡಾಡಿಗಳು ತಮ್ಮಟೆ ಹರೆಗಳ ಘೋರ ಧ್ವನಿಮಾಡಿ, ಮಾರಿ ಮಸಣಿ ಮುಂತಾದವಕ್ಕೆ ಕೋಳಿ ಕುರಿ ಕೋಣಗಳನ್ನು ಬಲಿಕೊಟ್ಟರೆ, ಸುಶಿಕ್ಷಿತ ನಾಗರಿಕರು ವೇದ-ಮಂತ್ರಘೋಷಮಾಡಿ, ಇಂದ್ರ ವರುಣಾದಿ ದೇವತೆಗಳಿಗೆ ಅಜ-ಗೋ-ಅಶ್ವಗಳನ್ನು ಬಲಿಕೊಡುತ್ತಿದ್ದರು. ಪ್ರಕಾರ ಬೇರೆ ಬೇರೆಯಾದರೂ, ಅನಾಚಾರ ಒಂದೇ, ಮನೋವಿಕಾರ ಒಂದೇ! ಬಸವಣ್ಣನವರು ತಾವು ಹುಟ್ಟಿ ಬೆಳೆದ ಬಾಗೇವಾಡಿಯಲ್ಲೋ, ಆಳಿ ಬಾಳಿದ ಕಲ್ಯಾಣದಲ್ಲೋ ಯಜ್ಞಯಾಗವೆಂಬ ಸುಶಿಕ್ಷಿತಕಿರಾತವೃತ್ತಿಯನ್ನು ಕಂಡು, ಅಂಥ ಯಾಗದಲ್ಲಿ ಯೂಪಸ್ತಂಭಕ್ಕೆ ಕಟ್ಟಿಹಾಕಿದ್ದ ಹೋತವೊಂದು ವಿಪ್ರರ ವೇದಘೋಷಕ್ಕೆ ಹೆದರಿ ಚೀರುತ್ತಿದ್ದುದನ್ನು ಕಂಡು, ಹೀಗೆ ಹೇಳಿರುವರು: ಯಾವಾಗ ಕೊಲ್ಲುವರೋ ಎಂದು ಮಾತು ಮಾತಿಗೂ ಹೆದರುತ್ತಿರುವೆಯಾ? ಎಲೆ ಹೋತೇ, ವೇದ-ಶಾಸ್ತ್ರಗಳನ್ನು ಓದಿದವರ ಮುಂದು ನೀನೆಂದು ಅಳು, ಅವರಿಗೆ ತಕ್ಕುದನ್ನು ಮಾಡುವನು, ದಕ್ಷನ ಯಾಗವನ್ನು ಧ್ವಂಸಮಾಡಿ ಪಶುಪ್ರಾಣಿಗಳ ಸೆರೆಬಿಡಿಸಿದವನಲ್ಲವೇ ಆ ಮಹಾದೇವನು !

*(ಕೃಪೆ : ಬಸವ ವಚನಾಮೃತ)*







## ಸುಗ್ಗಿಯ ಹಬ್ಬ ಸಂಕ್ರಾಂತಿ

– ಕವಿತಾಕೃಷ್ಣ
ಸಾಹಿತಿಗಳು,
ಕ್ಯಾತಸಂದ್ರ, ತುಮಕೂರು.

*ಸುಗ್ಗಿಯ ಕಾಲದಿ ಹಿಗ್ಗನು ತಂದಿತು ಸಿರಿವಂತಿಕೆಯ ಸಂಕ್ರಾಂತಿ*
*ಜನಮನ ತಣಿಸಿ ಜೀವಿಯ ನಲಿಸಿ ತಂದಿತು ಸುಖಶಾಂತಿ*
*ಎಳ್ಳು-ಬೆಲ್ಲ ಕಡಲೆ-ಕಬ್ಬು-ಪೊಂಗಲ್ ಉಣಿಸಿತು ಸಂಕ್ರಮಣ*
*ಸೂರ್ಯನ ಪೂಜಿಸಿ ಗೋವಿಗೆ ನಮಿಸುವ ಸಂಸ್ಕೃತಿ ಹಿರಿಮೆ ಅನುಕರಣ ॥*

ಕವಿವಾಣಿಯಂತೆ 'ಸಂಕ್ರಾಂತಿ' ಸುಗ್ಗಿಯ ಕಾಲದಲ್ಲಿ ಹಿಗ್ಗನ್ನು ಹೊತ್ತುಬರುವ ಹಬ್ಬ. ಜನಮನವನ್ನು ತಣಿಸಿ ಉತ್ಸಾಹ ತುಂಬುವ ಹಬ್ಬ, ನಾಡಿಗೆ ಸುಖ-ಶಾಂತಿ ತರುವ ಹಬ್ಬ. ಎಳ್ಳು ಬೆಲ್ಲವನು ಕೊಟ್ಟು ಎರಡು ಒಳ್ಳೆಯ ಮಾತನ್ನು ಆಡುವ ಹಬ್ಬ, ವಿಶೇಷವಾಗಿ ಲೋಕದ ಅಧಿಪತಿಯಾದ ಸೂರ್ಯ ದೇವನನ್ನು ಪೂಜಿಸಿ ಪುರಸ್ಕರಿಸುವ ಹಬ್ಬ. ರೈತರ ಪಾಲಿಗೆ ದೇವರಾಗಿರುವ ದನಕರುಗಳನ್ನು ಗೌರವಿಸುವ ಹಬ್ಬ. ಒಟ್ಟಾರೆ ಭಾರತೀಯ ಸಂಸ್ಕೃತಿಗೆ ಹಿರಿಮೆ ಗರಿಮೆಗಳನ್ನು ತರುವ ಹಬ್ಬ. ಹಬ್ಬಗಳ ಹಬ್ಬ ಸಂಕ್ರಾಂತಿ ಹಬ್ಬ.



ಗೋವುಗಳ ಪೂಜೆ – ಸಂಕ್ರಾಂತಿ ಹಬ್ಬದ ಒಂದು ಆಚರಣೆ

### *ಸಂಕ್ರಾಂತಿ ಎಂದರೇನು?*

ಸಂ+ಕ್ರಾಂತಿ ಅಂದರೆ 'ಪರಿಶುದ್ಧವಾದ ಪರಿವರ್ತನೆ' ಎಂದರ್ಥ. ಸೃಷ್ಟಿಯ ಕಾಲಚಕ್ರದಲ್ಲಿ ಇಂತಹ ಪರಿಶುದ್ಧವಾದ ಪರಿವರ್ತನೆ ಇದೆ. ಸೌರಮಂಡಲದಲ್ಲಿರುವ ಪ್ರತಿಯೊಂದು ಗ್ರಹ-ನಕ್ಷತ್ರಗಳು ಪರಿವರ್ತನ ಪಥ ಹೊಂದಿರುತ್ತದೆ. ಸೌರಮಂಡಲದ ಪ್ರಧಾನ ನಕ್ಷತ್ರವಾದ ಸೂರ್ಯನು ಸಹ ಮಕರರಾಶಿಯನ್ನು ಪ್ರವೇಶಿಸುವನು. ಪ್ರವೇಶವನ್ನು ಉತ್ತರಾಯಣ ಕಾಲದಲ್ಲಿ ಮಾಡುವುದರಿಂದ ಇದನ್ನು ಉತ್ತರಾಯಣ ಪುಣ್ಯಕಾಲವೆಂದು ಕರೆಯಲ್ಪಡುವುದು. ಈ ಕಾಲದಲ್ಲಿ ಮುಚ್ಚಿದ್ದ ಸ್ವರ್ಗದ ಬಾಗಿಲು ಮುಕ್ತವಾಗಿ ತೆರೆದಿರುವುದೆಂದು ಭಾರತೀಯರ ಅಚಲ ನಂಬಿಕೆ. ಇದನ್ನು 'ದೇವಯಾನ' ಎಂದು ಸಹ ಕರೆಯಲಾಗಿದೆ. ಮಹಾಭಾರತದ ಯುದ್ಧ ಕಾಲದಲ್ಲಿ ಶರಮಂಚದ ಮೇಲೆ ಮಲಗಿದ್ದಂತಹ ಭೀಷ್ಮಾಚಾರ್ಯನು ತನ್ನ ಪ್ರಾಣವನ್ನು ಈ ಉತ್ತರಾಯಣ ಪುಣ್ಯಕಾಲದಲ್ಲೇ ತೊರೆದದ್ದು. ಹುಟ್ಟು ಯಾವಾಗ ಬೇಕಾದರು ಆಗಬಹುದು. ಆದರೆ ಕೊನೆಯದಾಗಿ ಬರುವ ಸಾವು ಈ ಉತ್ತರಾಯಣ ಪುಣ್ಯಕಾಲದಲ್ಲೇ ಬರಬೇಕೆಂಬುದು ಹಿಂದೂ ಧರ್ಮಿಯರೆಲ್ಲರ ಮಹದಾಶಯವಾಗಿದೆ.

### *ಉತ್ತರಾಯಣ ಪುಣ್ಯಕಾಲ*

ವೈಜ್ಞಾನಿಕವಾಗಿ ಸೂರ್ಯ ಒಂದು ನಕ್ಷತ್ರ. ಆದರೆ ಹಿಂದುಗಳ ನಂಬುಗೆಯಂತೆ ಆತನೊಂದು ಗ್ರಹ. ಆ ಸೂರ್ಯನು ಅತ್ಯಂತ ಪ್ರಮುಖ. ಅದು ನಮ್ಮ ಬದುಕಿಗೆ ತುಂಬಾ ಉಪಕಾರಿ. ಹಾಗಾಗಿ ಸೂರ್ಯಾರಾಧನೆ ಜಾರಿಗೆ ಬಂದಿದೆ. ಸೂರ್ಯನನ್ನು ಪೂಜಿಸುವ ರೂಢಿ ಬಹು ಹಿಂದಿನಿಂದಲೂ ಇದೆ. ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಪ್ರವೇಶಿಸುವನು.

## ಎಳ್ಳು

'ತಿಲ' ಎಂಬ ಸಂಸ್ಕೃತದ ಹೆಸರಿನಿಂದ ಕರೆಯಲ್ಪಡುವ ಎಳ್ಳು ಪಿಷ್ಠ, ಸಸಾರಜನಕ, ಜಿಡ್ಡು, ಸುಣ್ಣ, ರಂಜಕ, ಕಬ್ಬಿಣ, 'ಎ' ಮತ್ತು 'ಬಿ' ಜೀವಸತ್ವ ಅಂಶಗಳಿರುವ ಆರೋಗ್ಯವರ್ಧಕ ಹಾಗೂ ರೋಗ ನಿವಾರಕ ಗುಣಗಳು ಮೇಳೈಸಿರುವ ಒಂದು ಅದ್ಭುತ ಕಾಳು.

ನಿಶ್ಶಕ್ತಿ, ಯಕೃತ್ತಿನ ತೊಂದರೆ, ಮಾಸಿಕ ಸ್ರಾವದ ತೊಂದರೆ, ರಕ್ತ ಭೇದಿ, ಹೊಟ್ಟೆಯ ಹುಣ್ಣು, ಸುಟ್ಟಗಾಯ ಗಳಿಗೆ ಹಾಗೂ ತಲೆಗೂದಲಿನ ಆರೋಗ್ಯ ಕಾಪಾಡುವಲ್ಲಿ ಎಳ್ಳು ಮಹತ್ತರ ಪಾತ್ರ ವಹಿಸುತ್ತದೆ.

★ ಹುರಿದ ಎಳ್ಳನ್ನು ಪುಡಿಮಾಡಿ ಅರ್ಧ ಚಮಚದಿಂದ ಒಂದು ಚಮಚ ಪುಡಿಯನ್ನು ಹಸುವಿನ ತುಪ್ಪದೊಡನೆ ದಿನಕ್ಕೆ ಮೂರು ಬಾರಿ ಸೇವಿಸಿದರೆ ರಕ್ತಭೇಧಿ, ಮಲಬದ್ಧತೆ ಮತ್ತು 'ಡಿ' ಜೀವಸತ್ವದ ಕೊರತೆಯಿಂದ ಉದ್ಭವಿಸುವ 'ರಿಟಿಕ್ಸ್' ಕಾಯಿಲೆಯು ಉಪಶಮನ ವಾಗುತ್ತದೆ.

★ ಅರ್ಧ ಚಮಚ ಹುರಿದ ಎಳ್ಳಿನ ಪುಡಿಯನ್ನು ಹಸುವಿನ ತುಪ್ಪದೊಡನೆ ದಿನಕ್ಕೆ ಮೂರು ಬಾರಿ ಸೇವಿಸಿದರೆ ಅಥವಾ ಎಳ್ಳಿನ ಪುಡಿಯನ್ನು ಬೆಣ್ಣೆಯೊಡನೆ ಸೇವಿಸಿದರೆ ರಕ್ತ ಸ್ರಾವದಿಂದ ಕೂಡಿದ ಮೂಲ ವ್ಯಾಧಿಯ ತೊಂದರೆ ನಿವಾರಣೆಯಾಗುತ್ತದೆ.

★ ಹೊಟ್ಟೆ ಹುಣ್ಣು ಮಲಬದ್ಧತೆ ಮತ್ತು ಮೊಳಕೆ ರೋಗ ಇರುವವರು ರಾತ್ರಿ ಮಲಗುವುದಕ್ಕೆ ಮುಂಚೆ ಎರಡು ಅಥವಾ ಮೂರು ಚಮಚ ಎಳ್ಳೆಣ್ಣೆಯನ್ನು ಬಿಸಿ ಹಾಲಿನೊಡನೆ ಸೇವಿಸುವುದರಿಂದ ಹೆಚ್ಚಿನ ಪ್ರಯೋಜನ ವಾಗುತ್ತದೆ.

★ ಅತಿ ಉಷ್ಣದಿಂದ ಕಣ್ಣುನೋವು ಬಂದಾಗ ಕಣ್ಣಿನ ರೆಪ್ಪೆಗಳ ಮೇಲೆ ಎಳ್ಳೆಣ್ಣೆ ಸವರಿದಾಗ ಅಥವಾ ಕಣ್ಣಿನೊಳಗೆ ಬಿಡುವುದರಿಂದ ಉತ್ತಮ ಫಲಿತಾಂಶ ದೊರೆಯುತ್ತದೆ.

★ ಸುಟ್ಟಗಾಯಗಳಿಗೆ ಎಳ್ಳೆಣ್ಣೆ ಸವರುವುದರಿಂದ ಗಾಯ ಬೇಗನೆ ವಾಸಿಯಾಗುತ್ತದೆ. ಜೊತೆಗೆ ಚಳಿಗಾಲದಲ್ಲಿ ಚರ್ಮ ಬಿರಿಯುವುದನ್ನು ತಪ್ಪಿಸಲು ಎಳ್ಳೆಣ್ಣೆಯನ್ನು ಸವರಬೇಕು. ಅಭ್ಯಂಜನ ಸ್ನಾನ ಮಾಡುವಾಗ ಬೇರೆ ಎಣ್ಣೆಗಳಿಗೆ ಬದಲಾಗಿ ಎಳ್ಳೆಣ್ಣೆಯನ್ನು ತಲೆಗೆ, ಮೈಗೆ ಹಚ್ಚಿಕೊಂಡು ಸ್ನಾನ ಮಾಡಿದರೆ ಚರ್ಮದ ಆರೋಗ್ಯ ವೃದ್ಧಿಯಾಗುವುದಲ್ಲದೆ ವಾತದ ಸಮಸ್ಯೆಯೂ ಪರಿಹಾರವಾಗುತ್ತದೆ.

★

ಪ್ರವೇಶಿಸುವಾಗ ಸಂಸ್ಕಾರಭರಿತವಾದ ಕ್ರಾಂತಿ ಆಗುವುದು. ಆದುದರಿಂದ ಈ ಪರಿವರ್ತನೆಯ ಕಾಲವನ್ನು 'ಸಂಕ್ರಾಂತಿ' ಎಂದು ಕರೆಯಲಾಗಿದೆ. ದಕ್ಷಿಣದ ಕಡೆಯಿಂದ ಉತ್ತರದತ್ತ ಚಲಿಸಲು ಆರಂಭಿಸುವ ಕಾರಣ ಆ ಕಾಲವನ್ನು 'ಉತ್ತರಾಯಣ ಪುಣ್ಯಕಾಲ' ವೆಂದು ಕರೆದರು.

### ಪುಣ್ಯಸ್ನಾನದ ಹಬ್ಬ

ಸಂಕ್ರಾಂತಿಯನ್ನು 'ಪುಣ್ಯಸ್ನಾನದ ಹಬ್ಬ' ಎಂದು ಭಾವಿಸಲಾಗಿದೆ. ಕೆಲವೆಡೆ ಈ ಹಬ್ಬವನ್ನು ಮೂರುದಿನಗಳಕಾಲ ಆಚರಿಸಲ್ಪಡುತ್ತದೆ. ಮೊದಲದಿನ ಎಣ್ಣೇ-ನೀರು ಸ್ನಾನ. ಅದು



ಮನೆಯಲ್ಲೇ ನಡೆಯುವಂತದ್ದು, ಇಡೀ ಕುಟುಂಬವೇ ಅಂದು 'ಅಭ್ಯಂಜನಸ್ನಾನ' ಮಾಡಿ, ಸೂರ್ಯದೇವನಿಗೆ ಪೂಜೆ ಸಲ್ಲಿಸುತ್ತದೆ. ಜೊತೆಗೆ ಅವರವರ ಕುಟುಂಬದ ಮನೆ ದೇವರನ್ನು ಪೂಜಿಸಿ ಗೌರವ ಸಲ್ಲಿಸುತ್ತಾರೆ. ಎರಡನೆಯದಿನ ಪ್ರಮುಖವಾದ ದಿನ. ಅಂದು ಪುಣ್ಯನದಿಗಳಲ್ಲಾಗಲಿ, ಎರಡು ಮೂರು ನದಿಗಳು ಕೂಡುವ ಸಂಗಮ ಸ್ಥಳಗಳಲ್ಲಿ ಪುಣ್ಯಸ್ನಾನ ಮಾಡುತ್ತಾರೆ. ಸೂರ್ಯನನ್ನು, ಪಶುಗಳನ್ನು ಪೂಜಿಸುತ್ತಾರೆ. ಸಿಹಿಯುಂಡು ಸುಖಿಸುತ್ತಾರೆ.

ಉತ್ತರ ಭಾರತದಲ್ಲೂ ಸಂಕ್ರಾಂತಿ ಆಚರಣೆ ಒಂದು ಬಗೆಯದಾಗಿದೆ. ಸಂಗಮ ಸ್ನಾನಕ್ಕೆ ಇವರು ತುಂಬಾ ಮಹತ್ವ





ಆದರೆ ಅಲಹಾಬಾದ್ ಕುಂಭಮೇಳ ಜಗದ್ವಿಖ್ಯಾತ ಸ್ನಾನಮೇಳ ವಾಗಿರುವುದು. ಇದು ೪೧ ದಿನಗಳ ಕಾಲ ನಿರಂತರವಾಗಿ ಜರುಗುವುದು. ಮಕರ ಸಂಕ್ರಾಂತಿಯಂದು ಆರಂಭಗೊಂಡ ಕುಂಭಮೇಳ ಮುಂದಿನ ಮಹಾಶಿವರಾತ್ರಿಯ ಪುಣ್ಯದ ದಿನದಂದು ಕೊನೆಯಾಗುವುದು.

### ರೈತರ ಹಬ್ಬ

ಭಾರತ ಇಂದು ಯಂತ್ರಗಳ ಯುಗದಲ್ಲಿದೆ. ಹಿಂದೆ ಅದು ಅವ್ಯವಸಾಯದ ಯುಗದಲ್ಲಿತ್ತು. ರೈತ ರಾಷ್ಟ್ರದ ಬೆನ್ನೆಲುಬಾಗಿದ್ದ. ಬೆವರು ಸುರಿಸಿ ಇಡೀ ವರ್ಗ ಹೊಲಗದ್ದೆ ತೋಟಗಳಲ್ಲಿ ದುಡಿಯುತ್ತಿದ್ದು, ಬಂದ ಬೆಳೆಯನ್ನು ಸುಗ್ಗಿಯ ಕಾಲದಲ್ಲಿ ಮನೆ



ನೀಡುವರು, ಅಲಹಾಬಾದಿನಲ್ಲಿ ಕುಂಭಮೇಳ ನಡೆಯುವುದು, ಇದು ಹನ್ನೆರಡು ವರ್ಷಕ್ಕೊಮ್ಮೆ ಮಾತ್ರ ನಡೆಯುವುದು, ಲಕ್ಷಾಂತರಮಂದಿ ಪಾಲುಗೊಂಡು ಆ ಪುಣ್ಯದಿನದಂದು ಮಂಗಳಸ್ನಾನ ಮಾಡುವರು. ಸಾಧುಗಳು, ಧಾರ್ಮಿಕರು ಒಗ್ಗೂಡಿ ಸ್ನಾನ ಮಾಡುವರು. ಅಂದು ಕಾವಿಪತಾಕೆಗಳು ಹಾರಾಡುವವು. ತ್ರಿಶೂಲ, ಲಾಠಿ, ಈಟಿಗಳು ಮೆರವಣಿಗೆಯಲ್ಲಿರುವ ಸಂನ್ಯಾಸಿಗಳ ಕೈಯಲ್ಲಿ ಕಂಡು ಬರುವವು. ಕರಕರ ಕೊರೆವ ಚಳಿಯಲ್ಲಿ ನಡೆಯುವ ಈ ಸಾಮೂಹಿಕ ಪುಣ್ಯಸ್ನಾನದ ಅಪೂರ್ವ ದೃಶ್ಯ ನೋಡಲು ಬಲು ಸೊಗಸು. ಆಲಹಾಬಾದ್‌ನಲ್ಲಿ ನಡೆವಂತೆ ಕುಂಭಮೇಳ ಹರಿದ್ವಾರ, ನಾಸಿಕ್, ಉಜ್ಜಯಿನಿ ಮೊದಲಾದೆಡೆಗಳಲ್ಲೂ ನಡೆಯುವುದು.

### ಸಂಕ್ರಾಂತಿ

ಸಂಕ್ರಾಂತಿ ಎಂದರೆ ಉಂಡು ಉಟ್ಟು ನಲಿಯುವುದಕ್ಕಷ್ಟೇ
ಸೀಮಿತವಾಗಬಾರದು,
ಸಂಕ್ರಾಂತಿ ಹಬ್ಬ ಹೃದಯದೊಳಗಿನ ಹಬ್ಬವಾಗಬೇಕು,
ಒಳಗೆ ಕೆಸರಿನ ದುರ್ಗಂಧ, ಹೊರಗೆ ಶ್ರೀಗಂಧ ಲೇಪನವಿದ್ದರೆ
ಸಂಕ್ರಾಂತಿಗೆ ಅರ್ಥವಿಲ್ಲ, ಬೆಲೆಯಿಲ್ಲ, ಹಳತುಗಳ ಪುನರಾವರ್ತನೆ
ಜೀವನದಲ್ಲಿ ಒಳಿತುಗಳ ಸಂಕ್ರಮಣವಾಗಬೇಕು,
ಅಜ್ಞಾನದ ಜಾಗದಲಿ ಸುಜ್ಞಾನ ಬಿತ್ತಿ ಬೆಳೆಯಬೇಕು,
ಅನೀತಿಯ ಅಳಿಸಿ ನೀತಿ ಮೆರೆಯಬೇಕು,
ಅಧರ್ಮ ವೃಕ್ಷವ ಕತ್ತರಿಸಿ ಧರ್ಮ ವೃಕ್ಷವ ಬೆಳೆಸಬೇಕು,
ದ್ವೇಷಾಸೂಯೆಗಳ ದಹಿಸಿ ಪ್ರೀತಿಪ್ರೇಮವ ಬಿತ್ತಬೇಕು,
ಅಹಂಕಾರವ ತೊರೆದು ಸಜ್ಜನಿಕೆಯ ಮರೆಯಬೇಕು,
ಎಳ್ಳಿನಲಿ ಎಣ್ಣೆಯ ತೆಗೆದು ಅರಿವಿನ ಜ್ಯೋತಿ ಬೆಳಗಬೇಕು,
ಕಹಿಯನು ಮರೆತು ಎಳ್ಳು ಬೆಲ್ಲವನು ಹಂಚಿ ತಿನ್ನಬೇಕು,
ಕಷ್ಟ-ಸುಖಗಳನು ಸಮಚಿತ್ತದಲಿ ನೋಡಬೇಕು,
ಆಗಲೇ ಸಂಕ್ರಾಂತಿ ಹಬ್ಬಕ್ಕೊಂದು ಅರ್ಥ ಬರುವುದಯ್ಯಾ
ಹರಳೂರು ಶ್ರೀ ವೀರಭದ್ರಪ್ರಭುವೇ.

– ಎಚ್.ಎಸ್. ಸಿದ್ದಗಂಗಪ್ಪ

ತುಂಬಿಕೊಳ್ಳುತ್ತಿದ್ದ. ಸುಗ್ಗಿಯ ಕಾಲದಲ್ಲಿ ಬರುವ ಸಂಕ್ರಾಂತಿಯನ್ನು ಹಿಗ್ಗಿನಹಬ್ಬವಾಗಿ ಆಚರಿಸಿದ. ಸೂರ್ಯನು ದಕ್ಷಿಣ ಅಯನದಿಂದ ಉತ್ತರ ಅಯನಕ್ಕೆ ಚಲಿಸುವ ದಿನವನ್ನು ಹಬ್ಬದ ದಿನವಾಗಿ ಭಾವಿಸಿದ, ಅಂದು ಸ್ನಾನಮಾಡಿ ಮಡಿಯುಟ್ಟು, ದನಕರುಗಳಿಗೂ ಮಡಿ ಮಾಡಿ ಅಲಂಕರಿಸಿದ, ಪೂಜಿಸಿದ. ಮೆರವಣಿಗೆ ಮಾಡಿದ. ಅಂದಿನ ಪದ್ಧತಿ ಇಂದಿಗೂ ಹಳ್ಳಿಗಳಲ್ಲಿ ಜೀವಂತವಾಗಿದೆ. ಸಂಕ್ರಾಂತಿ ಸೂರ್ಯದೇವನ ಹಬ್ಬವೂ ಅಹುದು, ದನ-ಕರುಗಳ ಹಬ್ಬವೂ ಅಹುದು. ಬೆಳೆಗಳ ಹಬ್ಬವೂ ಅಹುದು. ಒಡಲು ತುಂಬುವ ಆಹಾರ ಬೆಳೆಗಳನ್ನು ರೈತ ಮನೆತುಂಬಿಕೊಳ್ಳುವ ಕಾಲದಲ್ಲಿ ಆಚರಿಸಲ್ಪಡುವ 'ಸಂಕ್ರಾಂತಿ' ಅವನ ಬದುಕಿನಲ್ಲೂ ನವ ಪರಿವರ್ತನಶೀಲ ಭಾವವನ್ನು ಉಂಟುಮಾಡುವುದು.

### ಹಿಗ್ಗಿನ ಹಬ್ಬ

ವಿಶೇಷವಾಗಿ ಹಳ್ಳಿಯ ಜನರು ಸಂಕ್ರಾಂತಿಯನ್ನು ಭಕ್ತಿಭಾವದಿಂದ ಆಚರಿಸುವರು. ಸ್ನಾನಮಾಡಿ ಹೊಸಬಟ್ಟೆ ತೊಡುವರು. ಮನೆಯನ್ನು ಸಾರಿಸಿ, ಗುಡಿಸಿ, ರಂಗವಲ್ಲಿಗಳನ್ನು ಬಿಟ್ಟು ಅಲಂಕೃತಗೊಳಿಸುವರು. ಮನೆಯ ಬಾಗಿಲಿಗೆ, ಊರಬಾಗಿಲಿಗೆ ತಳಿರು ತೋರಣ ಕಟ್ಟುವರು, ಎಲ್ಲಾ ದೇವಾಲಯಗಳಲ್ಲೂ ವಿಶೇಷ

ಪೂಜೆ ಜರುಗುವುದು. ಎಳ್ಳುದಾನ ಮಾಡಿದರೆ ತಮ್ಮ ಪಾಪಕರ್ಮಗಳು ನಾಶವಾಗಿ ಪುಣ್ಯಸಂಚಯಯಾಗುವುದೆಂದು ಭಾವಿಸುವರು. ಆದಕ್ಕಾಗಿ ಕೊಬ್ಬರಿ ಚೂರು, ಬೆಲ್ಲದ ಚೂರು, ಕಡಲೇಬೀಜ, ಕಡಲೆಯೊಂದಿಗೆ ಪರಿಶುದ್ದಗೊಳಿಸಿದ ಬಿಳಿ ಎಳ್ಳನ್ನು ಬೆರಸಿ ಮನೆಮನೆಗೆ ಹೋಗಿ ಹಂಚುವರು. ಜೊತೆಯಲ್ಲಿ ಕಬ್ಬು, ಬಾಳೆಯ ಹಣ್ಣು ಚೂರುಗಳನ್ನೂ ಸಹ ಹಂಚುವರು. ಹಿಂದೆ ಲಂಗ-ದಾವಣಿ ತೊಟ್ಟ ಹೆಣ್ಣು ಮಕ್ಕಳು ಸಿಂಗಾರಮಾಡಿಕೊಂಡು ಊರಿನ ಮನೆಮನೆಗಳಿಗೆ ಹೋಗಿ ಎಳ್ಳು-ಬೆಲ್ಲ ಹಂಚು ಬರುತ್ತಿದ್ದರು. ಇಂದಿಗೂ ಈ ಪದ್ಧತಿ ಜೀವಂತವಾಗಿ ಉಳಿದಿದೆ. 'ಎಳ್ಳು-ಬೆಲ್ಲ ತಿಂದು, ಒಳ್ಳೆ ಮಾತಾಡು' ಎಂದು ಹಿರಿಯರು ಹೇಳುವರು. ಸಂಕ್ರಾಂತಿ ನಮ್ಮ ಬಾಯಿಂದ ಒಳ್ಳೆಯ ಮಾತುಗಳನ್ನು ಆಡುವಂತೆ ಪ್ರೇರೇಪಿಸುವ ಹಬ್ಬವೂ ಆಗಿದೆ.

***ಗೋಪೂಜೆ***

ರೈತರ ಪಾಲಿಗೆ ದನಕರುಗಳು ಕೇವಲ ಪಶುಗಳಲ್ಲ; ಸಾಕ್ಷಾತ್ ಬಸವಣ್ಣ. ಅವು ಹಾಲು, ಅನ್ನ ನೀಡುವ ಪ್ರತ್ಯಕ್ಷ ದೇವರುಗಳು. ಈ ಸಂಕ್ರಾಂತಿಯಂದು ರೈತರು ಸಾಮಾನ್ಯವಾಗಿ ದನಕರುಗಳ ಮೈತೊಳೆದು ಸಿಂಗರಿಸುತ್ತಾರೆ. ಕೊಂಬುಗಳನ್ನು ಎರೆದು, ಬಣ್ಣದ ಬಟ್ಟೆ, ಕಾಗದ ಕಟ್ಟುತ್ತಾರೆ. ಕೊಂಬಿಗಳಿಗೆ ಹಿತ್ತಾಳೆ ಕಳಸವಿಡುತ್ತಾರೆ. ವಾದ್ಯಗಳೊಂದಿಗೆ ಗೋವುಗಳನ್ನು ಮೆರವಣಿಗೆ ಮಾಡುತ್ತಾ ಊರಮುಂದಿನ ದೇವಾಲಯದ ಮುಂದೆ ಸಮಾವೇಶಗೊಳ್ಳುತ್ತಾರೆ. 'ಬಸವನ ಪೂಜೆ' ನಡೆಯುತ್ತದೆ. ದನಗಳಿಗೆ ಪೊಂಗಲ್, ಕಬ್ಬು, ಬಾಳೆ ಮುಂತಾದ ತಿನಿಸು ತಿನ್ನಿಸುತ್ತಾರೆ. ಸಂಜೆ ಬೆಂಕಿಹಾಕಿ ಪಶುಗಳನ್ನು ಕಿಚ್ಚು ಹಾಯಿಸುತ್ತಾರೆ. ಇದೊಂದು ಮೋಜಾಗಿ ಕಾಣುತ್ತದೆ. ನೋಡಲು ಜನರೆಲ್ಲಾ ಸೇರಿ, ಹರ್ಷಿಸುತ್ತಾರೆ.

ಕೆಲವು ರಾಜ್ಯಗಳಲ್ಲಿ ಸಂಕ್ರಾಂತಿಯಂದು 'ಗೂಳಿ ಕಾಳಗ' ವಿಶೇಷವಾಗಿ ನಡೆಯುತ್ತಿತ್ತು. ಈ ಪಂದ್ಯ ನೋಡಲು ಸಾವಿರಾರುಜನ ಸಮಾವೇಶಗೊಳ್ಳುತ್ತಿದ್ದರು. ಉತ್ತರಭಾರದಲ್ಲಿ ಉಳ್ಳವರು ಬಡವರಿಗೆ ತುಪ್ಪ ಮತ್ತು ಚಳಿತಡೆವ ಕಂಬಳಿಗಳನ್ನು ದಾನವಾಗಿ ಕೊಡುತ್ತಿದ್ದರು. ವೈದ್ಯಶಾಸ್ತ್ರದಲ್ಲಿ ತುಪ್ಪವು ಸೇವಿಸುವರಲ್ಲಿ ತೇಜಸ್ಸು ಮತ್ತು ಓಜಸ್ಸುಗಳನ್ನು ಹೆಚ್ಚಿಸುವುದೆಂದು ಹೇಳಿದೆ. ಆ ಕಾರಣ ತುಪ್ಪವನ್ನು ಸಂಕ್ರಾಂತಿಯಲ್ಲಿ ದಾನವಾಗಿ ನೀಡುತ್ತಿದ್ದರು.



***ವಿಶೇಷ ಹಬ್ಬ***

ಕರ್ನಾಟಕದಲ್ಲಿ 'ಸಂಕ್ರಾಂತಿ' ಎಂದು ಕರೆಯಲ್ಪಡುವ ಹಬ್ಬವು ಆಂಧ್ರಜನತೆ ಪಾಲಿಗೆ 'ಪೆದ್ದ ಪಂಡಗ' (ದೊಡ್ಡ ಹಬ್ಬ) ಆಗಿದೆ. ತಮಿಳುನಾಡಿನವರಿಗೆ 'ಪೊಂಗಲ್' ಆಗಿದೆ. ಅಕ್ಕಿ, ಹಾಲು, ತುಪ್ಪ, ಬೆಲ್ಲ, ಏಲಕ್ಕಿ, ದ್ರಾಕ್ಷಿ, ಗೋಡಂಬಿ, ಬಾದಾಮಿ ಮುಂತಾದವುಗಳಿಂದ ಮಾಡಿದ ಸಿಹಿಖಾದ್ಯಕ್ಕೆ 'ಪೊಂಗಲ್' ಎನ್ನುವರು. ತಮಿಳುನಾಡಿನ ಜನ ಈ ವಿಶೇಷಖಾದ್ಯವಾದ 'ಪೊಂಗಲ್'ನ ಹೆಸರನ್ನೇ ಹಬ್ಬಕ್ಕಿಟ್ಟಿರುವುದು ಒಂದು ವಿಶೇಷವಾಗಿದೆ.

ಸಂಕ್ರಾಂತಿಯ ಈ ಹಬ್ಬ ಅಲ್ಲಿ ಮೂರುದಿನ ಆಚರಿಸಲ್ಪಡುವುದು. ಮೊದಲದಿನ ಹಬ್ಬವನ್ನು 'ಭೋಗಿ ಪೊಂಗಲ್' ಎನ್ನುವರು, ಸಂಕ್ರಾಂತಿ ದಿನದ ಹಬ್ಬವನ್ನು 'ಸೂರ್ಯ ಪೊಂಗಲ್' ಎನ್ನುವರು. ಕರ್ನಾಟಕದ ಉತ್ತರಭಾಗದಲ್ಲಿ 'ಭೋಗಿ ಹುಣ್ಣಿಮೆ' ತುಂಬ ಮಹತ್ವ ಪಡೆದಿದೆ. ಆಂಧ್ರಪ್ರದೇಶದಲ್ಲಿ ಈ ಹಬ್ಬ ಮೂರು ದಿನಗಳ ಕಾಲ ನಡೆಯುವುದು. ಹಳ್ಳಿಗರು ಇಡೀ ರಾತ್ರಿ ಕುಣಿಯುವರು. ಈ ನೃತ್ಯವು ಕುಣಿತಕ್ಕಿನ್ನ ಹಾಡನ್ನು ಪ್ರಧಾನವಾಗಿ ಭಾವಿಸುವುದು, 'ಗೊಬ್ಬಿ ಪಾಟಲು' (ಗೋಪಿ ಹಾಡು) ಎಂದು ಅಲ್ಲಿನ ಜನ ಕರೆವರು. 'ಹಾಡು' ನಮ್ಮ ಜನರ ಉಸಿರು. ಹಾಡು ನಮ್ಮ ಜನರ ಬದುಕು' ಎಂಬುದನ್ನು ಈ ಪರಂಪರೆ ಸಾರುತ್ತದೆ.

ಸಂಕ್ರಾಂತಿ ಸೂರ್ಯಹಬ್ಬ. ಹಾಗೆಯೇ ಕೃಷಿಕರ ಹಬ್ಬ. ದೇವರಿಗೆ ಸಮಾನರಾದ ಮಕ್ಕಳನ್ನು ಅಲಂಕರಿಸಿ, ಗೌರವಿಸುವ ಹಬ್ಬ. ದೀನದಲಿತರಿಗೆ ದಾನನೀಡುವ ಹಬ್ಬ. ಮಂಗಳಸ್ನಾನದ ಹಬ್ಬ. ಎಳ್ಳು-ಬೆಲ್ಲ ಮೆಲ್ಲುವ ಹಬ್ಬ, ಜನಗಳ ಹಬ್ಬದಂತೆ ಇದು ದನಗಳ ಹಬ್ಬವೂ ಅಹುದು. ಸುಗ್ಗಿಯ ಕಾಲದ ಪ್ರಧಾನ ಹಬ್ಬವೂ ಹೌದು.

**ಸಂಕ್ರಾಂತಿ ಹಬ್ಬದಂದು ಜನ-ದನಗಳ ಸಿಂಗಾರ**
**ಎಳ್ಳು ಬೆಲ್ಲ ತಿಂದು ಒಳ್ಳೆತನ ಕಲಿತರೆ ಬಾಳು ಬಂಗಾರ**

★





ಕಾಯಕವೇ ಕೈಲಾಸ

**ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು**
ಮಠಾಧ್ಯಕ್ಷರು,
ಶ್ರೀ ಸಿದ್ಧಗಂಗಾ ಮಠ, ೫೭೨ ೧೦೪,
ಕರ್ನಾಟಕ ರಾಜ್ಯ.

ದೂರವಾಣಿ : 2282211
ಫ್ಯಾಕ್ಸ್ 0816-2282511



ಕ್ರ. ಸಂ. ಎಸ್.ಎಂ. 4969/2003-04

ದಿನಾಂಕ : 12-12-2003

॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

## ಶ್ರೀ ಸಿದ್ಧಗಂಗಾ ಮಠ – ಶ್ರೀ ಗೌರಿಶಂಕರ ಸ್ವಾಮಿಗಳು – ಸತ್ಯ ಸಂಗತಿ ಸ್ಪಷ್ಟನೆ

ಶ್ರೀ ಸಿದ್ಧಗಂಗಾ ಮಠದ ಸೇವಾ ಚರಿತ್ರೆಯಲ್ಲಿ ಅತ್ಯುಜ್ವಲ ತಪೋನಿಧಿಗಳು, ಶಿವಯೋಗಿಗಳು ಆಗಿ ಹೋಗಿದ್ದಾರೆ. ಪರಮಪೂಜ್ಯ ಲಿಂಗೈಕ್ಯ ಶಿವಯೋಗಿ ಶ್ರೀ ಉದ್ದಾನ ಮಹಾಸ್ವಾಮಿಗಳವರ ಕೃಪಾನುಗ್ರಹದಿಂದ ನಾವು ದಿನಾಂಕ ೩.೩.೧೯೩೦ರಂದು ಅವರ ಉತ್ತರಾಧಿಕಾರಿಗಳಾಗಿ ನಿಯೋಜಿತರಾಗಿ ಶ್ರೀ ಗುರುಗಳ ದಿವ್ಯಮಾರ್ಗದರ್ಶನದಲ್ಲಿ ಸಂಸ್ಥೆಯ ಸೇವಾ ಚಟುವಟಿಕೆಗಳಲ್ಲಿ ಕರ್ತವ್ಯ ಮುಖಿಗಳಾಗಿ ನಡೆದು ಬಂದೆವು. ದಿನಾಂಕ ೧೧.೧.೧೯೪೧ರಂದು ನಮ್ಮ ಗುರುಗಳು ಲಿಂಗೈಕ್ಯರಾದಂದಿನಿಂದ ಶ್ರೀಮಠದ ಅಧ್ಯಕ್ಷರಾಗಿ ಸಂಸ್ಥೆಯ ಅಭಿವೃದ್ಧಿಗಾಗಿ ಶ್ರಮಿಸುತ್ತಾ ಬಂದಿದ್ದೇವೆ. ನಾವು ಶ್ರೀಮಠದ ಅಧಿಕಾರವನ್ನು ಸ್ವೀಕರಿಸಿದ ಸಂದರ್ಭದಲ್ಲಿ ಸಂಸ್ಥೆಯಲ್ಲಿ ಮೂವತ್ತು ಮಂದಿ ವಿದ್ಯಾರ್ಥಿಗಳು ಆಶ್ರಯ ಪಡೆದಿದ್ದರು. ಇಂದು ಶ್ರೀಮಠದಲ್ಲಿ ಎಂಟು ಸಾವಿರಕ್ಕೂ ಹೆಚ್ಚು ಮಕ್ಕಳು ಆಶ್ರಯ ಪಡೆದಿದ್ದಾರೆ. ಅವರೆಲ್ಲ ವಿವಿಧ ಜಾತಿ, ಮತ, ಕುಲ, ಪಂಗಡಗಳಿಗೆ ಸೇರಿದ ದೀನ, ದಲಿತ, ಅನಾಥ ಮತ್ತು ಅಸಹಾಯಕರಾಗಿದ್ದಾರೆ. ಅವರ ಯೋಗಕ್ಷೇಮ ನಿರ್ವಹಣೆಯೇ ನಮ್ಮ ಚಿಂತನೆಯಾಗಿದೆ.

೧೯೭೩ರಲ್ಲಿ ಶ್ರೀ ಜಗದೀಶ್‌ರವರಿಗೆ ನಿರಾಭಾರಿ ನಿರಂಜನ ಜಂಗಮ ಪಟ್ಟಾಧಿಕಾರವನ್ನು (ಸನ್ಯಾಶ್ರಮವನ್ನು) ಅನುಗ್ರಹಿಸಿ ಶ್ರೀ ಗೌರಿಶಂಕರ ಸ್ವಾಮಿಗಳು ಎಂದು ನಾಮಕರಣ ಮಾಡಿ ನಮ್ಮ ಉತ್ತರಾಧಿಕಾರಿಗಳನ್ನಾಗಿ ನಿಯೋಜಿಸಿದೆವು. ಅವರ ಅಭ್ಯಾಸ, ಆಚಾರ ಪಾಲನೆ, ಅನುಪಾನಗಳಿಗಾಗಿ ವಿಶೇಷ ವ್ಯವಸ್ಥೆ ಮಾಡಿದೆವು. ಶ್ರೀಮಠದ ಪರಂಪರೆಯ ಪಾವಿತ್ರ್ಯತೆ ಮತ್ತು ಘನತೆ ಗೌರವಗಳ ಪರಿಚಯ ಮಾಡಿಕೊಡುತ್ತ ಬಂದೆವು. ಸಮಾಜದಲ್ಲಿ ಗೌರವ ಸಂಪಾದಿಸಬೇಕಾದರೆ ಕಾವಿಲಾಂಛನಕ್ಕೆ ಮೌಲ್ಯ ತರಬೇಕಾದರೆ ಚಾರಿತ್ರ್ಯ ಶುದ್ಧಿಯನ್ನು, ಶ್ರಮಗೌರವವನ್ನು, ಸೇವಾ ಮನೋಭಾವನೆಯನ್ನು, ಮಾನವೀಯತೆಯನ್ನು ಕಾಪಾಡಿಕೊಂಡು ಬರಬೇಕೆಂಬುದನ್ನು ತಿಳಿಸುತ್ತಾ ಬಂದೆವು. ಆದರೆ ದುರ್ದೈವ. **ಶ್ರೀ ಗೌರಿಶಂಕರ ಸ್ವಾಮಿಗಳು ನಮ್ಮ ನಿರೀಕ್ಷೆಯನ್ನು ಶೂನ್ಯಮಾಡಿದರು. ಆಶೆ ಆಮಿಷಗಳಿಗೆ ಒಳಗಾಗಿ ವ್ಯರ್ಥವಾಗಿ ಕಾಲಹರಣ ಮಾಡುತ್ತ ಬಂದರು. ಶ್ರೀಮಠದ ಸೇವಾ ಅಭಿವೃದ್ಧಿಯಲ್ಲಿ ನಿರಾಸಕ್ತರಾದರು.** ನಮಗೆ ನಿರಾಶೆಯನ್ನುಂಟು ಮಾಡಿದರು. ವೈಯಕ್ತಿಕ ಸ್ವಾಮಿಗಳಾದವರಿಗೆ ಇರಬೇಕಾದ ಪಾವಿತ್ರ್ಯತೆ, ಚಾರಿತ್ರ್ಯ ಶುದ್ಧಿಯನ್ನು ಕಳೆದುಕೊಂಡರು. ಅನೇಕ ಕಹಿ ಪ್ರಕರಣಗಳನ್ನು ಸೃಷ್ಟಿ ಮಾಡಿ ನಮಗೆ ಸಹಿಸಲಾಗದ ಮಾನಸಿಕ ಯಾತನೆಯನ್ನುಂಟು ಮಾಡಿದರು. ಆದರಿಂದಾಗಿ ಶ್ರೀಮಠದ ಶ್ರೇಯೋಭಿವೃದ್ಧಿಗೆ ಆತಂಕವುಂಟಾಯಿತು. ನಮ್ಮ ಸೇವಾ ಜೀವನದಲ್ಲಿ ಎಂದೂ ಅನುಭವಿಸದಂತಹ ಆಘಾತವಾಯಿತು.

ಇದನ್ನು ದೀರ್ಘಕಾಲ ಪರೀಕ್ಷಿಸಿ ಮನಗಂಡ ನಾವು ದಿನಾಂಕ ೩೦.೩.೧೯೮೮ರಂದು ಶ್ರೀ ಗೌರೀಶಂಕರ ಸ್ವಾಮಿಗಳನ್ನು ನಮ್ಮ ನಿಯೋಜಿತ ಉತ್ತರಾಧಿಕಾರಿತ್ವದಿಂದ ವಜಾ ಮಾಡಿದೆವು. ಆ ದಿವಸವೇ ಈ ಹಿಂದೆ ನಿರಾಭಾರಿ

ನಿರಂಜನ ಜಂಗಮ ಪಟ್ಟಾಧಿಕಾರ ಸ್ವೀಕಾರ ಮಾಡಿದ್ದ ಶ್ರೀ ಸಿದ್ಧಲಿಂಗ ಸ್ವಾಮಿಗಳನ್ನು ನಮ್ಮ ಮುಂದಿನ ಉತ್ತರಾಧಿಕಾರಿಗಳನ್ನಾಗಿ ನೇಮಕ ಮಾಡಿದ್ದು ಸರ್ವವೇದ್ಯ.

**ಈ** ಸಂದರ್ಭದಲ್ಲಿ ಸ್ಪಷ್ಟಮಾಡುವುದೇನೆಂದರೆ **ಶ್ರೀ ಗೌರಿಶಂಕರ ಸ್ವಾಮಿಗಳು ಎಂದೂ ಶ್ರೀ ಸಿದ್ಧಗಂಗಾ ಮಠದ ಅಧ್ಯಕ್ಷರಾಗಿರಲಿಲ್ಲ. ಕೇವಲ ನಮ್ಮ ಉತ್ತರಾಧಿಕಾರಿಗಳೆಂದು ನಿಯೋಜಿತರಾಗಿದ್ದರಷ್ಟೆ.** ಅವರನ್ನು ವಜಾ ಮಾಡಿದ ನಂತರ ಶ್ರೀ ಗೌರೀಶಂಕರ ಸ್ವಾಮಿಗಳು ಸಿವಿಲ್ ನ್ಯಾಯಾಲಯದ ಮೆಟ್ಟಿಲು ಹತ್ತಿ ಓ.ಎಸ್. ೫೮೬:೮೯ರಲ್ಲಿ ದಾವೆ ಹೂಡಿ, ತಾವು ಸಹ ಮಠಾಧ್ಯಕ್ಷರೆಂದು, ಸಹ ಮಠಾಧ್ಯಕ್ಷರಾಗಿ ಶ್ರೀ ಮಠದಲ್ಲಿ ಮುಂದುವರೆಯುವಂತೆ ತೀರ್ಮಾನ ಕೊಡಬೇಕೆಂದು ಮತ್ತು ಶ್ರೀಮಠದಲ್ಲಿ ಮಠಾಧ್ಯಕ್ಷರಾಗಿ ಧಾರ್ಮಿಕ ಮತ್ತು ವ್ಯವಹಾರಿಕ ಕೆಲಸಗಳನ್ನು ನಿರ್ವಹಿಸಿಕೊಂಡು ಹೋಗಲು ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಾಗಲಿ ಮತ್ತು ಇತರೆ ಯಾರೇ ಆಗಲಿ ಅಡ್ಡಿಬರದಂತೆ ಶಾಶ್ವತ ಪ್ರತಿಬಂಧಕಾಜ್ಞೆ ನೀಡಬೇಕೆಂದು ಕೋರಿರುತ್ತಾರೆ. ಮತ್ತು ಮಧ್ಯಂತರ ಅರ್ಜಿ ಹಾಕಿ ತಾವು ಶ್ರೀಮಠದಲ್ಲಿ ಸಹ ಮಠಾಧ್ಯಕ್ಷರಾಗಿ ಮಠದ ಕೆಲಸ ಕಾರ್ಯಗಳನ್ನು ಮಾಡಿಕೊಂಡು ಶ್ರೀಮಠದಲ್ಲಿ ವಾಸ್ತವ್ಯ ಹೂಡಿಕೊಂಡು ಇರಲು ತಾತ್ಕಾಲಿಕ ತಡೆಯಾಜ್ಞೆ ನೀಡಬೇಕೆಂದು ಕೇಳಿದ್ದು, ಅದನ್ನು ಸಿವಿಲ್ ನ್ಯಾಯಾಲಯ ತಿರಸ್ಕರಿಸಿ ವಜಾ ಮಾಡಿದರು. ಅದರ ವಿರುದ್ಧ ಅವರು ಹೈಕೋರ್ಟಿಗೆ ಅಪೀಲು ಮಾಡಿ – ಅಪೀಲು ವಜಾ ಆಗಿದೆ. ನಂತರ ಅವರು ಸುಪ್ರಿಂ ಕೋರ್ಟಿಗೆ ಅಪೀಲು ಹೋಗಿ ಸುಪ್ರಿಂ ಕೋರ್ಟಿನಲ್ಲಿ ಸಹ ಅವರು ಕೋರಿದ್ದ ಬೇಡಿಕೆಗಳನ್ನು ತಿರಸ್ಕರಿಸಿರುತ್ತಾರೆ.

ಶ್ರೀ ಗೌರಿಶಂಕರ ಸ್ವಾಮಿಗಳು ಎಂದೂ ಶ್ರೀ ಸಿದ್ಧಗಂಗಾ ಮಠದ ಅಧ್ಯಕ್ಷರಾಗಿರಲಿಲ್ಲ. ಇಂದೂ ಆಗಿಲ್ಲ. ಆದರೆ ಅವರ ಕೆಲವು ಅನುಯಾಯಿಗಳು, ಭಕ್ತಿ ಸಮರ್ಪಣಾ ಸಮಾರಂಭ ಎಂಬುವ ಪ್ರಚಾರ ತಂತ್ರಗಳು ದುರುದ್ದೇಶಪೂರ್ಣವಾಗಿದ್ದು, ಸಮಾಜದಲ್ಲಿ ಒಡಕನ್ನುಂಟು ಮಾಡುವ, ಸಂಸ್ಥೆಯ ಅಭಿವೃದ್ಧಿಗೆ ಅಡ್ಡಿ ಅಡಚಣೆಗಳನ್ನೊಡ್ಡುವ ದುರ್ಭಾವ ಪ್ರಯತ್ನಗಳಾಗಿರುತ್ತವೆ. ಆದುದರಿಂದ ಸಮಾಜ ಬಾಂಧವರು, ಭಕ್ತಾದಿಗಳು, ಅಭಿಮಾನಿಗಳು, ಹಿತೈಷಿಗಳು, ಹಳೆಯ ವಿದ್ಯಾರ್ಥಿಗಳು ಇಂತಹ ಅಪಪ್ರಚಾರಗಳಿಗೆ ಗಮನ ಕೊಡಬಾರದೆಂದು ಯಾವುದೇ ಉತ್ತೇಜನ ನೀಡಬಾರದೆಂದು ಈ ಮೂಲಕ ತಿಳಿಸಲಿಚ್ಛಿಸುತ್ತೇವೆ.

**ಕೊ**ನೆಯದಾಗಿ, ಶ್ರೀ ಗೌರಿಶಂಕರ ಸ್ವಾಮಿಗಳ ಬೆಂಬಲಿಗರು ತಮ್ಮಲ್ಲಿರುವ ಶಕ್ತಿ ಸಾಮರ್ಥ್ಯಗಳನ್ನು ಸಮಾಜದಲ್ಲಿ ಒಡಕುಂಟು ಮಾಡುವಂತಹ ಕಾರ್ಯಕ್ರಮಗಳಲ್ಲಿ ಬಳಸಿಕೊಳ್ಳುವುದರ ಬದಲು ಸಮಾಜವನ್ನು ಕಟ್ಟುವ, ಜನಕಲ್ಯಾಣಾತ್ಮಕವಾದ ಸತ್ಕಾರ್ಯಗಳಲ್ಲಿ ನಿರತರಾಗುವಂತೆ ಶ್ರೀ ಸಿದ್ಧಲಿಂಗೇಶ್ವರರು ಸದ್ಬುದ್ಧಿ ಸತ್ಪ್ರೇರಣೆಯನ್ನು ನೀಡಲಿ ಎಂದು ಹಾರೈಸುತ್ತೇವೆ.

(ಶ್ರೀ ಶಿವಕುಮಾರ ಸ್ವಾಮಿಗಳು)
ಮಠಾಧ್ಯಕ್ಷರು
ಶ್ರೀ ಸಿದ್ಧಗಂಗಾ ಮಠ





## ನಾಡಿನ ಹಿರಿಯ ಸಾಹಿತಿಗಳಿಂದ ಮನವಿ

**ನಾ**ಡಿನ ಧಾರ್ಮಿಕ ಮತ್ತು ಶೈಕ್ಷಣಿಕ ಸೇವೆಯಲ್ಲಿ ಅತ್ಯಂತ ಗೌರವಾನ್ವಿತ ಸ್ಥಾನ ಪಡೆದಿರುವ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಕೆಲವು ವರ್ಷಗಳ ಹಿಂದೆ ತಮ್ಮ ಉತ್ತರಾಧಿಕಾರಗಳನ್ನಾಗಿ ಶ್ರೀ ಗೌರಿಶಂಕರ ಸ್ವಾಮಿಗಳನ್ನು ನೇಮಿಸಿದ್ದು, ನಂತರ ಶ್ರೀಮಠದ ಘನತೆ ಗೌರವಗಳಿಗೆ ಉತ್ತರಾಧಿಕಾರಿಗಳಿಂದ ಧಕ್ಕೆಯುಂಟಾದ ಕಾರಣ ಅವರನ್ನು ತೆಗೆದುಹಾಕಿ ಆ ಸ್ಥಾನಕ್ಕೆ ಇನ್ನೋರ್ವ ಯುವಸ್ವಾಮಿಗಳಾದ ಶ್ರೀ ಸಿದ್ಧಲಿಂಗಸ್ವಾಮಿಗಳನ್ನು ನೇಮಕ ಮಾಡಿಕೊಂಡಿದ್ದು ಎಲ್ಲರಿಗೂ ತಿಳಿದ ವಿಷಯ.

ಶ್ರೀ ಸಿದ್ಧಗಂಗಾ ಮಠವನ್ನು ಬಿಟ್ಟ ಶ್ರೀ ಗೌರಿಶಂಕರ ಸ್ವಾಮಿಗಳು ತಮ್ಮ ವೈಯಕ್ತಿಕ ಅನುಷ್ಠಾನಕ್ಕೆ ಮತ್ತು ಸಮಾಜಸೇವಾ ಕಾರ್ಯಕ್ಕಾಗಿ ತಾವೇ ಪ್ರತ್ಯೇಕವಾಗಿ, ಸ್ವತಂತ್ರವಾಗಿ ಮಾಡಿಕೊಂಡಿರುವ ಮಠದ ಪ್ರಗತಿಗೆ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಯಾವುದೇ ಅಡ್ಡಿಯುಂಟುಮಾಡಿಲ್ಲ ಎಂಬುದು ನಮಗೆ ಖಚಿತವಾಗಿ ತಿಳಿದಿದೆ. ಆದರೆ ಪೂಜ್ಯ ಶ್ರೀ ಗೌರಿಶಂಕರ ಸ್ವಾಮಿಗಳು ಮತ್ತು ಅವರ ಬೆಂಬಲಿಗರು ಶ್ರೀ ಗೌರಿಶಂಕರ ಸ್ವಾಮಿಗಳನ್ನೇ ಸಿದ್ಧಗಂಗಾ ಮಠಾಧ್ಯಕ್ಷರೆಂದು ಬಿಂಬಿಸುವ ಮತ್ತು ಮಠದ ಮೇಲೆ ನಿಯಂತ್ರಣವನ್ನು ಸಾಧಿಸುವ ಪ್ರಯತ್ನ ನಡೆಸಿರುವುದನ್ನು ಶ್ರೀಮಠದ ಪರಿಚಯವಿರುವ ಯಾರೂ ಒಪ್ಪಲಾರರು.

ಶ್ರೀ ಸಿದ್ಧಗಂಗಾ ಮಠವು ಯಾವುದೇ ಜಾತಿಭೇದವಿಲ್ಲದೆ ಸಹಸ್ರ ಗ್ರಾಮೀಣ ಬಡಮಕ್ಕಳಿಗೆ ಅನ್ನ, ವಸತಿ ಮತ್ತು ಶಿಕ್ಷಣ ಒದಗಿಸುವಲ್ಲಿ ಇಡೀ ರಾಷ್ಟ್ರದ ಅಷ್ಟೇ ಅಲ್ಲ, ವಿಶ್ವದ ಅನೇಕ ಪ್ರಮುಖರ ಗಮನ ಸೆಳೆದಿರುವುದನ್ನು, ನಾವಾರೂ ಮರೆಯುವಂತಿಲ್ಲ. ಇಂತಹ ಶ್ರೇಷ್ಠ ಮತ್ತು ಆದರ್ಶ ಧಾರ್ಮಿಕ ಹಾಗೂ ಶೈಕ್ಷಣಿಕ ಕೇಂದ್ರದ ಪರಂಪರೆ ಮತ್ತು ಪ್ರಗತಿಗೆ ಅಡ್ಡಿಮಾಡದೆ, ಹಿರಿಯ ಗುರುಗಳಾದ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ನೊಂದುಕೊಳ್ಳದಂತೆ, ಶ್ರೀ ಗೌರಿಶಂಕರ ಸ್ವಾಮಿಗಳು ಈಗ ಸ್ವತಂತ್ರವಾಗಿ ಕಟ್ಟಿರುವ ಮಠವನ್ನೇ ಬೆಳಸಲಿ. ಇದಕ್ಕೆ ನಾವು ಮನಃಪೂರ್ವಕವಾಗಿ ಅವರಿಗೆ ಉತ್ತೇಜನ ನೀಡುತ್ತೇವೆ.

**ಈ**ಗ ಉಂಟಾಗಿರುವ ಅಹಿತರ ಮತ್ತು ನೋವಿನ ವಾತಾವರಣದಲ್ಲಿ, ಲೋಕಸೇವೆಯಲ್ಲೇ ಹಣ್ಣಾಗಿರುವ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ನಮ್ಮ ಸಂಪೂರ್ಣ ನೈತಿಕ ಬೆಂಬಲವಿದೆ ಎಂಬುದನ್ನು ಸಾರ್ವಜನಿಕರ ಗಮನಕ್ಕೆ ತರುತ್ತಿದ್ದೇವೆ. ಮತ್ತು ಈ ವಿಷಯದಲ್ಲಿ ನಾಡಿನ ಎಲ್ಲ ವರ್ಗದವರೂ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜೊತೆಯಲ್ಲಿ ಇದ್ದಾರೆ ಎಂಬ ಬಗೆಗೆ ನಮಗೆ ಸಂಶಯವಿಲ್ಲ. ದೀನದಲಿತರಿಗೆ ಆಶ್ರಯ ನೀಡುತ್ತಿರುವ ಮತ್ತು ಸುದೀರ್ಘ ಜನಹಿತ ಪರಂಪರೆಯನ್ನು ಪಡೆದಿರುವ ಶ್ರೀ ಸಿದ್ಧಗಂಗಾ ಮಠದ ಪಾವಿತ್ರ್ಯತೆ ಮತ್ತು ಘನತೆ-ಗೌರವಗಳಿಗೆ ಧಕ್ಕೆಯುಂಟಾಗುವಂತೆ ಯಾರೂ ನಡೆದುಕೊಳ್ಳಬಾರದೆಂದು ನಾವು ಮನವಿ ಮಾಡಿಕೊಳ್ಳುತ್ತೇವೆ.

(ಗೊ.ರು. ಚನ್ನಬಸಪ್ಪ)

(ಡಾ. ಎಚ್.ಎಂ. ಮರುಳಸಿದ್ದಯ್ಯ)

(ಡಾ. ಎಂ. ಚಿದಾನಂದಮೂರ್ತಿ)

(ಡಾ. ಸಾ.ಶಿ. ಮರುಳಯ್ಯ)



# ಶ್ರೀ ಸಿದ್ಧೇಶ್ವರ ಪುರಾಣ

– ಕೋ.ರಂ. ಬಸವರಾಜು

ಅಲ್ಲಮನ ಅವತಾರವೆಂದೇ ಲೋಕದಲ್ಲಿ ಖ್ಯಾತಿವೆತ್ತ ಅನಾದಿರಾಜನ ಜಂಗಮ ಜಗದ್ಗುರು ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಯನ್ನು ಕುರಿತು ಬಂದಿರುವಷ್ಟು ವಿಪುಲವಾದ ಸಾಹಿತ್ಯ ಮತ್ತೊಬ್ಬ ಶರಣರನ್ನು ಕುರಿತು ಬಂದಿರುವುದಿಲ್ಲ. ಪ್ರಧಾನವಾಗಿ; ವಿರಕ್ತತೋಂಟದಾರ್ಯ, ಶಾಂತೇಶ, ಹೇರಂಬ ಕವಿಗಳಲ್ಲದೆ ಪ್ರಾಸಂಗಿವಾಗಿ; ನಲವತ್ತಕ್ಕೂ ಮಿಕ್ಕು ಕವಿ ವಚನಕಾರರು ಈ ಸಿದ್ಧಲಿಂಗ ಯತಿಯನ್ನು ಕುರಿತು ಪ್ರಸ್ತಾಪಿಸಿದ್ದಾರೆ. ಅಂಥವರಲ್ಲಿ ಸಿದ್ಧಲಿಂಗೇಶ್ವರರ ಸಾಕ್ಷಾತ್ ಪರಂಪರೆಯಲ್ಲಿ ಬಂದ ವಿರಕ್ತ ತೋಂಟದಾರ್ಯನ ''ಸಿದ್ಧೇಶ್ವರ ಪುರಾಣ'' ಬಹುಮುಖ್ಯ ವಾದುದು.

ಸಿದ್ಧೇಶ್ವರ ಎಂದರೂ ಒಂದೇ; ಸಿದ್ಧಲಿಂಗೇಶ್ವರರೆಂದರೂ ಒಂದೇ. ಈ ಎರಡೂ ಹೆಸರುಗಳು ಜಂಗಮದೀಕ್ಷೆಯನ್ನು ಕೊಟ್ಟ ಮೇಲೆ ಅವರ ಗುರು ಶ್ರೀ ಗೋಸಲ ಚನ್ನಬಸವೇಶ್ವರರು ಕೊಟ್ಟ ನೂತನ ಆಶ್ರಮದ ಅಭಿಧಾನ. ಆದ್ದರಿಂದ ಸಿದ್ಧೇಶ್ವರ ಪುರಾಣ ಎಂದರೆ ತೋಂಟದ ಶ್ರೀ ಸಿದ್ಧಲಿಂಗೇಶ್ವರರ ದಿವ್ಯಚರಿತೆ. ಇದರಲ್ಲಿ ೨೫ ಸಂಧಿಗಳು ೧೩೫೫ ವಾರ್ಧಕ ಷಟ್ಪದಿ ಪದ್ಯಗಳಿವೆ. ಶ್ರೀ ಸಿದ್ಧಗಂಗಾ ಗುರುಪರಂಪರೆಯ ನಡವಳಿಗೆ ಆಧಾರವಾಗಿದೆ.

*ಒಂದನೆಯ ಸಂಧಿ*

ಅನಾದಿನಿರಂಜನ ಜಂಗಮ ಪರಂಪರೆಯ ಮೂಲದ ನಿರೂಪಣೆಯೇ ಈ ಸಂಧಿಯ ಪ್ರಧಾನ ವಿಷಯವಾಗಿದೆ. ಪರಶಿವನ ಸಾಕ್ಷಾತ್ ಹೃದಯಗರ್ಭದಿಂದ ಅನಾದಿಭಕ್ತನ ಜನನ. ಆ ಅನಾದಿ ಭಕ್ತನೇ ಬಸವಣ್ಣ. ಆ ಅನಾದಿ ಭಕ್ತಬಸವಣ್ಣನ ಹೃದಯಗರ್ಭದಿಂದ ಅನಾದಿ ನಿರಂಜನ ಜಂಗಮನ ಉದಯ. ಈತನೇ ಕೃತಯುಗದಲ್ಲಿ ನಿರಂಜನ ಗಣೇಶ್ವರನಾಗಿ, ತ್ರೇತಾಯುಗದಲ್ಲಿ ಜ್ಞಾನಾನಂದ ಗಣೇಶ್ವರನಾಗಿ ದ್ವಾಪರಯುಗದಲ್ಲಿ ನಿರ್ಮಲ ಗಣೇಶ್ವರನಾಗಿ, ಈ ಕಲಿಯುಗದಲ್ಲಿ ಅನಾದಿ ನಿರಂಜನ ಜಂಗಮನಾಗಿ ಅವತಾರ ಮಾಡಿದನು. ಈ ಸಂಧಿಯಲ್ಲಿ ೯೧ ಪದ್ಯಗಳಿವೆ.

*ವಿಶೇಷ ವಿಚಾರಗಳು*

೧. ನಾರದನ ಮಾತನ್ನು ಕೇಳಿ ಭೂಲೋಕದಲ್ಲಿ ನಾಶವಾಗುತ್ತಿರುವ ವೀರಶೈವ ಧರ್ಮವನ್ನು ಪುನರುತ್ಥಾಪನ ಗೈಯಲು ಯಾರನ್ನು ಕಳುಹಿಸುವುದೆಂಬುದಾಗಿ ಪರಶಿವನು ಕ್ಷಣಕಾಲ ಚಿಂತೆಯನ್ನು ನಟಿಸುತ್ತಾನೆ. ಆಗ ಅವನ ಹೃನ್ನಿಲಯದಲ್ಲಿದ್ದ ಬಸವೇಶನು 'ನನ್ನ ಹೃದಯದಲ್ಲಿರುವ ಅನಾದಿ ನಿರಂಜನ ಜಂಗಮನು ಹೋಗುವನು. ಅದೇಕೆ ಚಿಂತಿಸುವಿರಿ' ಎನ್ನುತ್ತಾನೆ. ಆಗ ಪಾರ್ವತಿಯು ಶಿವನ ಹೃದಯಮಂದಿರಲದಲಿರ್ಪ ಆ ಅನಾದಿಭಕ್ತ ಬಸವನನ್ನು ನೋಡಬೇಕೆಂದು ಶಿವನನ್ನು ಪ್ರಾರ್ಥಿಸುತ್ತಾಳೆ. ಆಗ ಶಿವನು ತನ್ನ ಎದೆಯನ್ನು ಬಗಿದು ತೋರಿಸುತ್ತಾನೆ. ಆ ಸಂದರ್ಭದಲ್ಲಿ ಗೌರಿಯು ಬಸವನನ್ನು ಸ್ತುತಿಸುವ ಪದ್ಯಚತುಷ್ಟಯ ಮತ್ತು ದೇವತೆಗಳು ಸ್ತುತಿಸುವ ಪದ್ಯವೊಂದು ಸೇರಿ ''ಬಸವಸ್ತುತಿ ಪಂಚಕ'' ಉತ್ತಮ ಸ್ತೋತ್ರ ಸಾಹಿತ್ಯವಾಗಿರುತ್ತದೆ.

*(ನೋಡಿ : ಸಂಧಿ :೧ ಪದ್ಯಗಳು ೫೬, ೫೯, ೬೦ ಮತ್ತು ೬೧.)*

೨. ಇಲ್ಲಿ ವರ್ಣಿಸಿರುವ ಅನಾದಿನಿರಂಜನ ಜಂಗಮನ ವಿಶ್ವವಿರಾಟ್‌ರೂಪವು ಶ್ರೀಕೃಷ್ಣನ ವಿಶ್ವರೂಪದರ್ಶನಕ್ಕಿಂತಲೂ ಅದ್ಭುತವಾಗಿದೆ.

೩. ಅನಾದಿ ನಿರಂಜನ ಜಂಗಮನು ಕೃತಾದಿಯುಗಗಳಲ್ಲಿ ಬೇರೆ ಬೇರೆ ಗಣೇಶ್ವರರಾಗಿ ಅವತರಿಸುವನೆಂಬ ಅಂಶವು ಆದಿ ರೇಣುಗಳು ಬೇರೆ ಬೇರೆ ಯುಗಗಳಲ್ಲಿ ಬೇರೆ ಬೇರೆ ಲಿಂಗಗಳಲ್ಲಿ ಅವತರಿಸುವರೆಂಬ ಪರಿಕಲ್ಪನೆಗೆ ಸಂವಾದಿಯಾಗಿರುತ್ತದೆ. ಪರಶಿವನ ಹೃದಯಗರ್ಭ ಎಂದರೂ ಒಂದೇ ಸರ್ವಶೂನ್ಯ ನಿರಾಲಂಬಲಿಂಗದ ಗರ್ಭವೆಂದರೂ ಒಂದೇ. ಬಸವಾದಿ ಶರಣರೇ ಆಗಲಿ, ರೇಣುಕಾದಿ ಆಚಾರ್ಯರೇ ಆಗಲಿ ಉಭಯರೂ ಪರಶಿವನ ಅಪ್ಪಣೆಯಂತೆ ಲಿಂಗೋದ್ಭವರೇ. ಇದರಲ್ಲಿ ಭೇದವಿಲ್ಲ. ಉಭಯವರ್ಗದವರೂ ಪೂರ್ಣಾವತಾರಿಗಳಾಗಿ ಭುವಿಗಿಳಿದ ಪರಶಿವನ ಗಣವರ ವರ್ಗದವರೇ.

*(ನೋಡಿ : ಷಟ್‌ಸ್ಥಲಜ್ಞಾನ ಸಾರಾಮೃತ – ತೋಂಟದ ಸಿದ್ಧಲಿಂಗೇಶ್ವರರು. ವಚನ : ೬೦ ಮತ್ತು ೬೧.)*







# ದೊಡ್ಡವರ ಬದುಕು

– ಟಿ.ಆರ್. ಮಹಾದೇವಯ್ಯ
ಸದಸ್ಯರು, ರಾಜ ಭಾಷಾ ಆಯೋಗ
ಕರ್ನಾಟಕ ಸರ್ಕಾರ, ಬೆಂಗಳೂರು.

ದೊಡ್ಡವರ, ಲೋಕಹಿತ ಸಾಧಕರ ಬದುಕನ್ನು ಅರ್ಥಮಾಡಿ ಕೊಳ್ಳುವುದು ಸುಲಭದ ಮಾತಲ್ಲ. ಮಾಡಿಕೊಂಡದ್ದೇ ಆದರೆ ಅದೊಂದು ಸಫಲ ಯತ್ನ. ಏಕೆಂದರೆ ಅವರ ಬದುಕೆಂಬುದು ಒಂದು ಬೆಳಕಿನ ಗುಡಿ. ನಮ್ಮ ನಮ್ಮ ಯೋಗ್ಯತಾನುಸಾರ ಮನದ ಮೂಲೆ ಮುಡುಕುಗಳನ್ನೆಲ್ಲಾ ಬೆಳಗಿಸಿಕೊಳ್ಳಬಹುದು. ಅವರ ಬದುಕೆಂಬುದು ಅಮೃತೋದಧಿ. ನಮ್ಮ ನಮ್ಮ ಹೃದಯಪಾತ್ರೆ ಹಿಡಿಸುವಷ್ಟನ್ನು ತುಂಬಿಕೊಂಡು ಕೃತಾರ್ಥರಾಗಬಹುದು.

*ಕಾಣುವ ಕಣ್ಣು*

ಬೆಳಕನ್ನೇ ಕಾಣಲಾಗದ ಕಣ್ಣಿಗೆ ಬಸವ, ಬುದ್ಧ ಮೊದಲಾದ ಪುಣ್ಯಾತ್ಮರ ಬೆಳಕಿನ ಅಮಳ ವ್ಯಕ್ತಿತ್ವದ ಪ್ರಭೆ ಸಹ್ಯವಾಗದೇ ಹೋಗಬಹುದು. ನಮ್ಮ ಹೃದಯದ ಪಾತ್ರೆ ತೀರ ಸಂಕುಚಿತವಾಗಿದ್ದು ಕೆಲವಂಶವನ್ನು ಮಾತ್ರ ಗ್ರಹಿಸುವಂತಿದ್ದು ದೊಡ್ಡವರ ನಿತ್ಯಜೀವನದ ಸಮಗ್ರ ಪರಿಚಯವಾಗದೇ ಹೋಗುವ ಸಾಧ್ಯತೆಯುಂಟು.



ಲೋಕದಲ್ಲಿ ವಾಸ್ತವ ಸಂಗತಿಗಳ ಗ್ರಹಣಮಾಡುವಾಗ ಮನುಷ್ಯನಿಗೆ ಎರಡು ಅನಾರೋಗ್ಯಕರ ಪ್ರವೃತ್ತಿಗಳು, ಮಾನಸಿಕ ದೌರ್ಬಲ್ಯಗಳು ಶಾಪಗಳಂತೆ ಕಾಡುತ್ತವೆ. ಒಂದು – ಪೂರ್ವ ಗ್ರಹಿಕೆ (Prejudice) ಮತ್ತೊಂದು ಪಕ್ಷಪಾತ ದೃಷ್ಟಿ (Partial outlook).

*ಸಂಕುಚಿತ ದೃಷ್ಟಿ*

ಬಸವಣ್ಣನಂಥ ಮಹಾಮಾನವತಾವಾದಿಯನ್ನೂ ಸಹ ಯಾವುದೋ ಒಂದು ಗುಂಪಿಗೆ, ಜಾತಿಗೆ ಸೇರಿಸಲು ಹವಣಿಸುತ್ತದೆ ಈ ಅಭಿಷಾಪ. ಯಾವ ಮಹಾನುಭಾವಿ ತನ್ನ ಬಳಿ ಬಂದ ಯಾರಲ್ಲಿಯೂ ಎಂದೂ ಜಾತಿಯನ್ನರಸಲಿಲ್ಲವೋ, 'ಇವನಾರವ, ಇವನಾರವ?' ಎಂದು ಪ್ರಶ್ನಿಸದೆ, 'ಇವ ನಮ್ಮವ, ಇವ ನಮ್ಮವ' ಎಂದು ತನ್ನ ಅಸೀಮ ವಾತ್ಸಲ್ಯದಿಂದ ಆಲಂಗಿಸಿ ನಿಂತನೋ, ಯಾವ ಧರ್ಮಾತ್ಮ 'ಬಂದ ಭಕ್ತರ ಕಾಯಕವಾವುದೆಂದು ಬೆಸಗೊಂಡೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ' ಎಂದು ದೇವರಾಣೆ ಇಟ್ಟು ಅಂತೆಯೆ ನಡೆದನೋ ಅಂಥ ಬಸವಣ್ಣನನ್ನು ಕೇವಲ ಕೆಲವರಿಗೆ ಸೇರಿದವನೆಂದು ಸಂಕುಚಿತ ಎಲ್ಲೆಯನ್ನು ನಿರ್ಮಿಸುವುದು ಅವಿವೇಕವೇ ಸರಿ.

*ವಿಶ್ವ ಕುಟುಂಬಿ*

ವಾಸ್ತವಿಕವಾಗಿ ಮಹಾಪುರುಷರೆಲ್ಲರು ವಿಶ್ವಕುಟುಂಬಿಗಳು. ಅವರ ಬಳಿ ಸಂಕುಚಿತತೆಗೆ ಎಡೆಯಿಲ್ಲ. ಅವರು ಸದಾ ಚಿಂತಿಸುವುದು ಸಕಲರ ಲೇಸನ್ನು. ಅವರ ಎದೆಯ ತುಂಬ ತುಂಬಿರುವುದು ನಿಸ್ವಾರ್ಥವಾದ ಲೋಕಕಾರುಣ್ಯ. ಬಸವಣ್ಣನವರು ಈ ವಿಚಾರದಲ್ಲಿ ಇನ್ನೂ ಮುಂದೆ ಹೋಗಿದ್ದಾರೆ. ತಾವು ಹುಟ್ಟಿನಿಂದ ಅತ್ಯಂತ ಶ್ರೇಷ್ಠರು, ಸಾಮಾಜಿಕ ಸ್ಥಾನಮಾನಗಳಲ್ಲೂ ಪ್ರತಿಷ್ಠಿತರು, ಸುಜ್ಞಾನಿಗಳು, ಅನುಭಾವಿಗಳು; ಕನ್ನಡ ನಾಡಿನ, ಅಷ್ಟೇ ಅಲ್ಲ ಭರತಖಂಡದ ನಾನಾ ಕಡೆಯಿಂದ ಆಧ್ಯಾತ್ಮ ಚಿಂತಕರನ್ನು ಕಲ್ಯಾಣದತ್ತ ಸೆಳೆದ ಲೋಹಚುಂಬಕ ಶಕ್ತಿಸಂಪನ್ನರು. ಹಾಗೆಂದು ಅವರೆಂದೂ ಬೀಗಲಿಲ್ಲ, ಬದಲು ಬಾಗಿದರು. 'ಬಾಗಿದ ತಲೆಯ, ಮುಗಿದ ಕೈಯ ಬಸವ' ಆದರು. ಇದಕ್ಕೆ ಅವರ ಸರಸ ಸಜ್ಜನಿಕೆ; ವಿನಯಗುಣ ಕಾರಣವಷ್ಟೇ ಅಲ್ಲ; ಅವರು ಕಟ್ಟ ಬಯಸಿದ ಸರ್ವ ಸಮಾನತೆಯ ನವಸಮಾಜಕ್ಕೆ ಅಂಥ ಆದರ್ಶವಾದ ನಡವಳಿಕೆಯ ಅಗತ್ಯವಿತ್ತು.

*ಸಮೀಕರಣದ ಪವಾಡ*

ತಾನು ಶ್ರೇಷ್ಠ ಕುಲದವನಾಗಿ, ದೊಡ್ಡ ಪದವಿಯಲ್ಲಿರುವ ಬಿಂಕ ಬಿಗುಮಾನದೊಡನೆಯೇ ಎತ್ತರದ ವೇದಿಕೆ ಏರಿ ಸಮಾನತೆಯ ಉಪದೇಶ ಮಾಡಹೋಗಲಿಲ್ಲ ಬಸವಣ್ಣ. ಕೆಳವರ್ಗದ ಜನ, ದೀನ-ದಲಿತರು, ಶೋಷಣೆಗೆ ಒಳಗಾದ ಜನ ತನ್ನಿಂದ ದೂರ ಸರಿದಾರು ಎಂಬ ಎಚ್ಚರ ಅವರಿಗಿತ್ತು, ಅದಕ್ಕೆ ಅವರು ತಮ್ಮ ಕುಲಪದವಿಗಳನ್ನು ಹಿಂದೆ ಮಾಡಿ ತನ್ನನ್ನು ಶಿವಶರಣರ ಆಳಿನ ಆಳು ಎಂದೂ, ಆ ಕಾಲಕ್ಕೆ ತೀರ ಕನಿಷ್ಠ ಕುಲದವರೆಂದು ಕರೆಸಿಕೊಳ್ಳುತ್ತಿದ್ದ ಮಾದಾರ ಚೆನ್ನಯ್ಯ, ಕಕ್ಕಯ್ಯ ಮೊದಲಾದವರ ಮಗ ತಾನು ಎಂದು ಹೇಳಿಕೊಂಡರು. ತಮ್ಮನ್ನು ಸಾಮಾನ್ಯರೊಡನೆ, ಅದರಲ್ಲೂ ದಲಿತರೊಡನೆ ಸಮೀಕರಿಸಿಕೊಂಡರು. ಅಷ್ಟೇ ಅಲ್ಲ, ಹೊಲೆಯರ ಕೇರಿಗೆ

ಹೋಗಿ ಅಲ್ಲಿನ ಶರಣರೊಡನೆ ಪೂಜೆ ಮಾಡಿ, ಸಹಪಂಕ್ತಿ ಭೋಜನ ಮಾಡಿದರು ! ಆ ಕಾಲಕ್ಕೆ ಇದೊಂದು ಪವಾಡ ಸದೃಶವಾದ ಘಟನೆ.

### *ಪತಿತೋದ್ಧಾರ*

ಸಮಾಜದಲ್ಲಿ ದುಷ್ಟರನ್ನು ಕಳ್ಳರು, ಸುಳ್ಳರು, ಪುಂಡರು-ಪೋಕರಿಗಳು, ಪಾಪಿಗಳು ಎಂದು ಜರಿದು ಅವರಿಗೆ ಶಿಕ್ಷೆ ವಿಧಿಸಿ, ಅವರು ತಮ್ಮ ತಪ್ಪನ್ನು ತಿದ್ದಿಕೊಂಡು ಉದ್ಧಾರದ ಮಾರ್ಗ ಕಂಡುಕೊಳ್ಳಲಾಗದಂತಹ ಸ್ಥಿತಿ ಇತ್ತು. ಇದನ್ನು ಕಂಡ ಬಸವಣ್ಣ, ಮಾನವ ಸ್ವಭಾವತಃ ಒಳ್ಳೆಯವನೆ, ಒಳ್ಳೆಯ ಸಂಸರ್ಗ ಒದಗಿಸಿದರೆ, ಮನಶ್ಶುದ್ಧಿಗೆ ಅವಕಾಶ ನೀಡಿದರೆ ಸಜ್ಜನನಾಗುವುದು ಎಷ್ಟು ಹೊತ್ತು? ಎಂದು ಅನುಭವದಿಂದ ಇದನ್ನು ಕಂಡುಕೊಂಡ ಬಸವಣ್ಣ ಪಾಪಿಗೂ ಉದ್ಧಾರದ ಮಾರ್ಗವಿದೆ ಎಂದು ಸಾರಿದರು. ತಮ್ಮ ಮಹಾಮನೆಯಲ್ಲಿ ಅಂಥವರಿಗೆ ಅವಕಾಶವಿತ್ತರು. ಇದು ಅವರು ಒಳ್ಳೆಯದನ್ನು ಬಿತ್ತಿ ಬೆಳೆದ ಬಗೆ !

ಎಡವಿದ ಕಾಲನ್ನು ಕತ್ತರಿಸಿ ಹಾಕಬೇಕೆಂಬ ಧೋರಣೆಯಿದ್ದ ಕಾಲದಲ್ಲಿ ತಪ್ಪು ಮಾಡಿದವರಿಗೆ ತಿದ್ದಿಕೊಳ್ಳುವ ಅವಕಾಶ ತೋರಿದ ಪತಿತೋದ್ಧಾರಕನ ಮಾತುಗಳಿವು :

*ಎಲವೋ ಪಾಪಕರ್ಮವ ಮಾಡಿದವನೆ,*
*ಎಲವೋ ಬ್ರಹ್ಮಹತ್ಯವ ಮಾಡಿದವನೆ,*
*ಒಮ್ಮೆ ಶರಣೆನ್ನು, ಕೂಡಲಸಂಗ ಶರಣೆನ್ನು,*
*ಸಕಲ ಪಾಪಂಗಳು ಲಯವಹವು.*

### *ಕಾಯಕದ ಕಲಿತನ*

ಜಾತಿ ಕುಲ ನೋಡದೆ, ದೇಶ, ಭಾಷೆ, ತಿಳಿಯಹೋಗದೆ, ತನ್ನಂತೆಯೆ ಜಗದ ಜೀವಿಗಳೆಲ್ಲ ಎಂದು ಭಾವಿಸಿ ಎಲ್ಲರ ಒಳಿತಿಗಾಗಿ ತನ್ನ ಬಾಳನ್ನೆ ಸವೆಸಿದ ಬಸವಣ್ಣ ಎಲ್ಲರಿಗೂ ಸೇರಿದವ, ಶೋಷಿತರಲ್ಲಿ, ಕೆಳವರ್ಗದವರಲ್ಲಿ ಮನೆಮಾಡಿದ್ದ ಮೌಢ್ಯ ಅಧೀರತೆಗಳನ್ನು, ಕೀಳರಿಮೆಯನ್ನು ನೀಗಿ, ಅವರಲ್ಲಿ ಆತ್ಮಗೌರವ ವನ್ನು ಮೂಡಿಸಿ ಸ್ವತಂತ್ರ ಆಲೋಚನಾ ಶಕ್ತಿ ಬರುವಂತೆ ಮಾಡಿ ಗೌರವಯುತ ಜೀವನ ನಡೆಸುವಂತೆ ಮಾಡಿದ್ದು, ಅವರನ್ನು ದಾಸ್ಯದಲ್ಲಿ, ದಿಗಿಲಿನಲ್ಲಿಟ್ಟು ದುಡಿಸಿಕೊಂಡು ತಮ್ಮ ಬೊಜ್ಜು ಬೆಳೆಸಿಕೊಳ್ಳುತ್ತಿದ್ದ ಮೇಲ್ಜಾತಿಯವರೆನಿಸಿಕೊಂಡವರಿಗೆ ಇದು ಸಹನವಾಗಲಿಲ್ಲ. ಎಲ್ಲರೂ ದುಡಿದೇ ತಿನ್ನಬೇಕು. ದುಡಿಯದೇ ತಿನ್ನುವ ಅನ್ನ ವಿಷ ಎಂದ ಬಸವಣ್ಣ, ವೃತ್ತಿಯಲ್ಲಿ ಮೇಲು-ಕೀಳೆಂಬುದಿಲ್ಲವೆಂದು ಸಾರಿ ಸತ್ಯ ಶುದ್ಧ ಕೆಲಸವನ್ನು 'ಕಾಯಕ'ವೆಂದು ಕರೆದ; ಅದರ ಪರಿಣಾಮವಾಗಿ ಸಕ್ರಿಯ ಸಮಾಜ ರೂಪುಗೊಂಡಿತು. ಎಲ್ಲಿ ನೋಡಿದರೂ ಕಾಯಕದ ಕಲಿಗಳೇ, ಸೋಮಾರಿತನಕ್ಕೆ ವಿದಾಯ. ಅಗೌರವವೆಂದು ಮೂಲೆ ಗುಂಪಾಗಿದ್ದ ಅನೇಕ ಕಸುಬುಗಳು, ಕಲೆಗಳು ಮತ್ತೆ ಜೀವ ಪಡೆದವು; ಮಾನ್ಯತೆ ಪಡೆದವು. ಆದರೆ ಕಷ್ಟ ಬಂದದ್ದು ಕೈಕೆಸರು ಮಾಡಿಕೊಳ್ಳದೇ ಬಾಯಿ ಮೊಸರು ಮಾಡಿಕೊಳ್ಳುತ್ತಿದ್ದ ಮೈಗಳ್ಳರಿಗೆ ! ಪರರ ಬೆವರಿನಲ್ಲಿ, ಕಣ್ಣೀರಿನಲ್ಲಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದ ಮೈಗಳ್ಳರಿಗೆ ! ಅಂಥವರಿಗೆ ಬಸವಣ್ಣ ಆತನ ಮಾನವೀಯ ಮೌಲ್ಯದ ಆಚರಣೆಗಳು, ಅಸಹನೀಯವೆನಿಸಿದವು ! ಈಗಲೂ ಅವು ಕೆಲವರಿಗೆ ಅಪಥ್ಯವೇ, ಏನು ಮಾಡುವುದು?

### *ಮಹಾತ್ಮರು ದೇವರೆ?*

ಮಹಾತ್ಮರ ಬಗ್ಗೆ ನಮ್ಮಲ್ಲಿ ಇನ್ನೊಂದು ಅನಾರೋಗ್ಯಕರ ಪ್ರವೃತ್ತಿ ಇದೆ. ಅದು ಅವರಿಗೆ ದೇವತ್ವವನ್ನು ಆರೋಪ ಮಾಡುವುದು. ಇದು ಅತಿಭಕ್ತಿ ಅತಿಭಾವುಕತೆಯಿಂದಲೊ, ಮೌಢ್ಯದಿಂದಲೋ? ಬಸವಣ್ಣನನ್ನು ದೇವರೆಂದು ಗಣಿಸಿ ಮೂರ್ತಿಮಾಡಿ ಗುಡಿಯೊಳಗೆ ಸೇರಿಸಿ ಬೀಗ ಹಾಕಿಬಿಡುವುದು! ಬಸವಣ್ಣ ಕೈಲಾಸದಿಂದ ಧರೆಗಿಳಿದು ಬಂದ ಅವತಾರಿ, ಪ್ರವಾದಿ; ಇಲ್ಲಿ ಅದ್ಭುತಗಳನ್ನು ಸಾಧಿಸಿ ಮತ್ತೆ ಕೈಲಾಸಕ್ಕೆ ತೆರಳಿದ ಶಿವಗಣಾಗ್ರಣ್ಯನೆಂದು ಹೇಳುವುದು; ಆತನನ್ನು ಪುರಾಣಪುರುಷನನ್ನಾಗಿ ಮಾಡುವುದು !

ವಾಸ್ತವವಾಗಿ ಬಸವಣ್ಣ ಒಬ್ಬ ಚಾರಿತ್ರಿಕ ವ್ಯಕ್ತಿ. ಎಂಟುನೂರು ವರ್ಷಗಳ ಹಿಂದೆ ಉತ್ತರ ಕರ್ನಾಟಕದ ಬಾಗೇವಾಡಿಯಲ್ಲಿ ಮಾನವ ಸಹಜವಾಗಿ ಹುಟ್ಟಿ ಕೂಡಲಸಂಗಮದಲ್ಲಿ ಅರಳಿ, ಮಂಗಳವೇಡೆ, ಅನಂತರ ಕಲ್ಯಾಣದಲ್ಲಿ ಮಾನವತೆಯ ಮಂದಾರವಾಗಿ ಅರಳಿ ಸಕಲಜೀವಿಗಳಿಗೆ ಲೇಸ ಬಯಸುವ ಸುಗಂಧ ಸೂಸಿದ ಮಹಾಮಾನವ. ಶಾಸನಗಳು, ಕಾವ್ಯಗಳು, ಅವರೇ ರಚಿಸಿರುವ ವಚನಗಳು ಇದಕ್ಕೆ ಸಾಕ್ಷಿಯಾಗಿವೆ. ಅವರ ವ್ಯಕ್ತಿತ್ವ ಎಷ್ಟು ಉಜ್ವಲವಾಗಿತ್ತೆಂದರೆ, ಅವರ ಕಾರ್ಯಕ್ಷೇತ್ರ ಎಷ್ಟು ವಿಶಾಲ ಮತ್ತು ವೈವಿಧ್ಯಮಯವಾಗಿತ್ತೆಂದರೆ ನೋಡಿದವರಿಗೆ ಬೆರಗು ಮೂಡುವಂತಿತ್ತು. ಅನವರತ ಸಾಧನೆಯಿಂದ, ನಿರ್ಮಲಾಂತಃಕರಣದಿಂದ ಅವರಲ್ಲಿ ಒಂದು ವಿಶಿಷ್ಟವಾದ ದೈವೀಕಳೆ ತುಂಬಿತ್ತು. ಇದನ್ನು ನೋಡಿದ ಜನ ಅವರ ಬಗ್ಗೆ ವಿಶೇಷ ಗೌರವ ಪೂಜ್ಯಭಾವಗಳನ್ನು ತಳೆದರು. ಕ್ರಮೇಣ ಭಯಭಕ್ತಿಯಿಂದ ದೂರ ನಿಂತು ಕೈಮುಗಿದರು. ಅವರು ಸಾಕ್ಷಾತ್ ದೇವರ ಅವತಾರವೆಂದು ನಂಬಿದರು.

### *ವೈಭವೀಕರಣ*

ಸರಿ, ಕಲ್ಪನೆಯು ಗರಿಗೆದರಿ ನಾಟ್ಯವಾಡಿತ್ತು. ಕಥೆ ಕಟ್ಟಿ ಹೇಳಿದರು, ಹಾಡಿ ಕುಣಿದರು. ಇಷ್ಟು ಸಾಕಾಯಿತು ನಮ್ಮ ಪುರಾಣಕಾರರಿಗೆ, ಕವಿಗಳಿಗೆ ! ಕಾವ್ಯದ ನಾಯಕನನ್ನಾಗಿ ಮಾಡಿ ಪವಾಡಗಳ ಮೆರವಣಿಗೆ ನಡೆಸಿ ವೈಭವೀಕರಿಸಿದರು. ಜನ ಬಯಸಿದ್ದೂ ಅದೇ. ಸರಿ, ಜನರ ಎದುರಿನಿಂದ ಮಾನವ ಹೃದಯದ ಬಸವಣ್ಣ ಹಿಂದೆ ಸರಿದು, ಕಾರಣಿಕ ಬಸವೇಶ್ವರ ಮೆರೆಯತೊಡಗಿದ ! ಪೂಜೆ ಆರಾಧನೆ ಆರಂಭವಾಗಿ ಬಿಟ್ಟವು!

### *ಆದದ್ದೇನು?*

ಹೋಗಲಿ, ಇದರಿಂದ ಒಳ್ಳೆಯದಾಯಿತೆ? ಕವಿಗಳು ಬಸವಣ್ಣನನ್ನು ಕುರಿತು ಅಗ್ಗಳಿಕೆಯ ಬಣ್ಣನೆ ಮಾಡುವಲ್ಲಿ ಒಂದು ಸದುದ್ದೇಶವನ್ನಿಟ್ಟುಕೊಂಡಿದ್ದರು. ಜನ, ಅವರಲ್ಲಿ ಶ್ರದ್ಧಾಭಕ್ತಿ, ವಿಶ್ವಾಸಗಳನ್ನು ತಳೆದು





ಅವರು ತೋರಿಸಿದ ಮಾರ್ಗದಲ್ಲಿ ಸಾಗಿ ಕೃತಾರ್ಥರಾಗಲಿ ಎಂದು, 'ಜನ ಬದುಕಲೆಂದು' ಅವರು ಕಾವ್ಯ ಬರೆದದ್ದು. ಆದರೆ ಆದದ್ದು ಏನು? ಬಸವಣ್ಣ ದೇವನಾದ್ದರಿಂದಲೇ ಅಂಥ ಅಸಾಮಾನ್ಯ ಕೆಲಸಗಳನ್ನು ಮಾಡಿದ. ನಾವು ಅಲ್ಪ ಮಾನವರು. ನಾವೇನು ಮಾಡಲಾದೀತು? ಎಂದು ನುಸುಳು ಬುದ್ಧಿಯನ್ನು ಕಲಿತೆವು. ನಮ್ಮ ಸ್ಥಿತಿಯಲ್ಲಿ ಬದಲಾವಣೆ, ಸುಧಾರಣೆಗಳನ್ನು ತಂದು ಕೊಳ್ಳುವ ಬದಲು ಮನಗಳ್ಳತನವನ್ನು ಹೆಚ್ಚಿಸಿಕೊಂಡೆವು.

### *ಮಾನವೀಯತೆಯ ಮಂದಾರ*

ಬಸವಣ್ಣ ನಮ್ಮಂತೆಯೇ ಅಪ್ಪಟ ಮಾನವ, ಅವರಿಗೂ ನಮಗಿರುವ ಎಲ್ಲಾ ಕೊರತೆಗಳೂ, ದೌರ್ಬಲ್ಯಗಳೂ ಇದ್ದವು. ಅವರು ಅವನ್ನು ಗುರುತಿಸಿಕೊಂಡರು, ಕ್ರಮೇಣ ನಿವಾರಿಸಿಕೊಂಡರು. ತನ್ಮೂಲಕ ತಮ್ಮ ಆಂತರಿಕ ಶಕ್ತಿಗಳ ವಿಕಾಸಕ್ಕೆ ಎಡೆಕೊಟ್ಟರು. ಸತತ ಸಾಧನೆಯಿಂದ ಪ್ರಗತಿಯ ಮಜಲುಗಳನ್ನು ಏರುತ್ತಾ ಮಹಾಮಾನವರಾದರು ಎಂಬುದು ನಮಗೆ ಮನವರಿಕೆಯಾದರೆ ಬಸವಣ್ಣ ನಮಗೆ ಸಮೀಪದವರಾಗುತ್ತಾರೆ; ಆತ್ಮೀಯರಾಗುತ್ತಾರೆ. ಕೈ ಹಿಡಿದು ನಡೆಸುವ ಸಖರಾಗುತ್ತಾರೆ; ತಿದ್ದುವ ಗುರುವಾಗುತ್ತಾರೆ. ಬಸವಣ್ಣನನ್ನು ನೋಡಬೇಕಾದದ್ದು ಹೀಗೆ.

### *ನಾವು ದೇವರನ್ನು ಕಾಣುವ ರೀತಿ*

ಅದು ಬಿಟ್ಟು ಅವರ ಮೂರ್ತಿಯನ್ನು ಮಾಡಿ ಹೂವೇರಿಸಿ, ತೆಂಗಿನಕಾಯಿ ಒಡೆದು ಕರ್ಪೂರಾರತಿ ಬೆಳಗಿ ತಮ್ಮ ಮುಗಿಲೆತ್ತರಕ್ಕೆ ಬೆಳೆದು ನಿಲ್ಲುವ ಆಶೋತ್ತರಗಳನ್ನು ಈಡೇರಿಸು; ಬಂದ ಸಂಕಟವನ್ನು ನಿವಾರಣೆ ಮಾಡು ಎಂದು ಬೇಡುವ ನೂರಾರು ದೇವತೆಗಳ ಶ್ರೇಣಿಗೆ ಸೇರಿಸಿ ಬಿಡೋಣವೆ? ಯಾವ ವಿಗ್ರಹಾರಾಧನೆ, ಯಾಂತ್ರಿಕ ಪೂಜೆ, ಬೇಡಿಕೆ ಮುಂದಿಟ್ಟುಕೊಂಡ ಆರಾಧನೆಗಳನ್ನು ಬೇಡವೆಂದು ಬಸವಣ್ಣ ಹೇಳಿದ್ದರೊ ಅದನ್ನು ಬಸವಣ್ಣನವರಿಗೇ ಮಾಡುವ ಹಾಸ್ಯಾಸ್ಪದ ರೀತಿ ಇದು. ದೇವರನ್ನು ಹೊರಗೆ ಹುಡುಕಬೇಡಿ. ನಿಮ್ಮೊಳಗೇ ಅರಸಿ ಎಂದರು ಅವರು. ಮನದ ಆಲಯದಿ ಭಗವಂತ ನೆಲೆಗೊಳ್ಳುವಂತೆ ಅದನ್ನು ನಿರ್ಮಲವಾಗಿಟ್ಟುಕೊಳ್ಳಿ ಎಂದರು. ಅದು ಬಿಟ್ಟು ಅವರನ್ನೇ ದೇವರು ಮಾಡಿದರೆ 'ದೇವರು ಸೆರೆಯೊಳ್, ದೇಗುಲ ಸೆರಮನೆ, ಕಾವಲು ಪೂಜಾರಿ' ಎಂದು ರಾಷ್ಟ್ರಕವಿ ವಿಡಂಬಿಸಿದಂತೆ ಆಗಿ ಅಣ್ಣನ ದಿವ್ಯಾದರ್ಶನಕ್ಕೇ ಕೊಡಲಿಪೆಟ್ಟು ಹಾಕಿದಂತಾಗುತ್ತದೆ !

### *ಮಾನವತಾವಾದಿ*

ಬಸವಣ್ಣ ಒಬ್ಬ ವಾಸ್ತವವಾದಿ. ಕಲ್ಪನೆಯ ಸ್ವರ್ಗ, ಕೈಲಾಸ, ಅಲ್ಲಿನ ಶಾಶ್ವತ ಸುಖ – ಇವುಗಳತ್ತ ಅವರು ಗಮನಕೊಡಲಿಲ್ಲ; ಅಮಾಯಕ ಜನರ ಗಮನವನ್ನು ಅತ್ತ ಸೆಳೆಯಲಿಲ್ಲ. ಬದಲು ತಮ್ಮ ತಮ್ಮ ಬದುಕಿನತ್ತ ತಿರುಗಿಸಿದರು. ಬಸವಣ್ಣ ನಮಗೆ ಅತ್ಯಮೂಲ್ಯ ಕಲೆಯನ್ನು ಕಲಿಸಿದರು. ಅದೇ ಬದುಕುವ ಕಲೆ. ತಾನು ಸುಖಿಸಿ ತನ್ನ ಸಹಜೀವಿಗಳನ್ನು ಸುಖವಾಗಿಡುವ ಕಲೆ. ದೃಷ್ಟಾಂತವಾಗಿ ತಾವೇ ಬಾಳಿ ತೋರಿಸಿದರು. ಸತ್ತ ಮೇಲೆ ಸಿಕ್ಕಬಹುದಾದ ಸ್ವರ್ಗಕ್ಕಿಂತ ಈಗ ವಾಸ್ತವವಾಗಿ ಇರುವ ಬಾಳು, ಅಲ್ಲಿನ ಅವಕಾಶಗಳನ್ನು ಸದುಪಯೋಗಪಡಿಸಿಕೊಳ್ಳಬೇಕೆಂದರು. ಸತ್ತ ಮೇಲೆ ಪಡೆವ ಸುಖಕ್ಕಾಗಿ ಬರೀ ಜಪ ತಪಗಳಲ್ಲಿ ತೊಡಗಿ ಜೀವಚ್ಛವವಾಗಿ ಬದುಕಿದ್ದಾಗಲೇ ಸತ್ತಂತಿರುವವರನ್ನು ಶರಣರು ಲೇವಡಿ ಮಾಡಿ ನುಡಿದದ್ದು ಇದಕ್ಕೇ. ನರನು ಹರನಾಗಿ ಮರ್ತ್ಯದಲ್ಲೇ ಮಹವನರಳಿಸುವ ರೀತಿ-ನೀತಿಯನ್ನು ಬಸವಣ್ಣ ತೋರಿ ನಮಗೆಲ್ಲಾ ಜೀವನ ಪ್ರೇಮವನ್ನು ಬಿತ್ತರಿಸಿದ್ದಾರೆ.

### *ಕ್ರಿಯಾತ್ಮಕ ತತ್ವಜ್ಞಾನಿ*

ಹೀಗಾಗಿ ಬಸವಣ್ಣ ಒಬ್ಬ ಕ್ರಿಯಾತ್ಮಕ ತತ್ವಜ್ಞಾನಿ. ಬದುಕಿನಿಂದ ದೂರ ನಿಲ್ಲದೆ, ಒಳಗೇ ಇದ್ದು ಇಹ-ಪರಗಳೆಡರ ಸಮನ್ವಯ ಸಾಧಿಸಿದ ಅಪೂರ್ವ ಮಹಾತ್ಮ. ಆತ ತೋರಿದ ದಾರಿ ಸರಳ, ಸುಂದರ, ಫಲಪ್ರದ, ಎಲ್ಲಕ್ಕಿಂತ ಹೆಚ್ಚಾಗಿ ಅನುಸರಣ ಯೋಗ್ಯ. ಅದನ್ನು ಆತ ಮನಗಾಣಿಸಿದ ರೀತಿ ಅನನ್ಯ. ಆತನ ಸೂಳ್ನುಡಿಗಳು ಎಷ್ಟು ಆತ್ಮೀಯ ! ಇಂಥವು ವಿಶ್ವಸಾಹಿತ್ಯದಲ್ಲೇ ಅಪರೂಪವೆಂದರೆ ಏನೂ ಹೇಳಿದಂತಾಗುವುದಿಲ್ಲ.

### *ಮುಕ್ತಮನಸ್ಸು ಬೇಕು*

ಹೀಗಿರುವಾಗ ಮಹಾತ್ಮರನ್ನು ಕುರಿತು ನಾವು ಆಲೋಚಿಸುವಾಗ ಮುಕ್ತಮನಸ್ಸಿನವರಾಗಿರಬೇಕು. ಪೂರ್ವಗ್ರಹಿಕೆ, ಪಕ್ಷಪಾತದೃಷ್ಟಿಗಳಿಂದ ಪಾರಾದ ಋಜುದೃಷ್ಟಿ ಬೇಕು. ಹೀಗೆ ನಾವು ಬಸವಣ್ಣನವರನ್ನು, ಅವರ ಸಾಧನೆ ಹಾಗೂ ಸಿದ್ಧಿಗಳನ್ನು ಗಮನಿಸಿದಾಗ ಅವರ ನಿಜವಾದ ಚಿತ್ರ ನಮ್ಮೆದುರು ನಿಲ್ಲುತ್ತದೆ. ಬಸವಣ್ಣ ದೇವಾಂಶಸಂಭೂತ, ಅವತಾರ ಪುರುಷನೆಂಬ ಅತಿ ಭಾವುಕತೆ ಬೇಡ. ಬಸವಣ್ಣ ಲಿಂಗವಂತ, ವೀರಶೈವರ ಗುರು, ಆತನ ಮಾತು ಅವರಿಗೆ ಮಾತ್ರ ಎಂಬ ಸಂಕುಚಿತ ದೃಷ್ಟಿ ಬೇಡವೇ ಬೇಡ. ಬಸವಣ್ಣನಲ್ಲಿ ನಾವು ಗುರುತಿಸಬೇಕಾದದ್ದು ಮಾನವೀಯತೆಯನ್ನು ಮಾತ್ರ. ಅದೇ ನಿಜವಾದ ಅಣ್ಣನ 'ಬಣ್ಣ'.

### *ಹತ್ತಿರವಿಟ್ಟುಕೊಳ್ಳೋಣ*

ಬಸವಣ್ಣ ಒಬ್ಬ ಮಾನವ, ದಯಾರ್ದ್ರ ಹೃದಯದ ಮಹಾಮಾನವ; ದೈವೀಗುಣಗಳನ್ನು ತನ್ನಲ್ಲಿ ಅರಳಿಸಿಕೊಂಡ ಮಹಾತ್ಮ ಎಂದು ತಿಳಿದು ಆತನನ್ನು ನಮ್ಮ ನಡುವೆಯೇ ಇಟ್ಟುಕೊಳ್ಳುವುದು ವಾಸಿ. ದೇವನೆಂದು ದೂರ, ಬಹು ದೂರ-ಗುಡಿಯೊಳಗಿಟ್ಟು ಬೀಗ ಹಾಕಿ ಬಿಡುವುದು ಬೇಡ. ತನ್ನ ದೊಡ್ಡಸ್ತಿಕೆಯೆನ್ನೆಲ್ಲಾ ಬಿಟ್ಟು ಆ ಪುಣ್ಯಾತ್ಮ ಜನಸಾಮಾನ್ಯರೊಡನಾಡಿಯಾಗಿದ್ದರು. ತಾನು ಶಿವಭಕ್ತರ ಕಿಂಕರರ ಕಿಂಕರನೆಂದು ಸೌಜನ್ಯದ ಪ್ರತಿಮೂರ್ತಿಯಾಗಿ ನಡೆದುಕೊಂಡು ಎಲ್ಲರೊಡನೊಂದಾಗಿದ್ದರು. ಈಗಲೂ ನಾವು ಅವರ ದಿವ್ಯನೆನಪನ್ನು ನಮ್ಮೊಡನೆಯೇ ಇಟ್ಟುಕೊಂಡಲ್ಲಿ ಅದು ನಮಗೆ ನಿರಂತರ ಸ್ಫೂರ್ತಿ ನೀಡುತ್ತದೆ. ಅವರ ನಡೆ-ನುಡಿ ನಮಗೆ ನಿರಂತರ ದಾರೀದೀಪವಾಗಿ ನಿಲ್ಲುತ್ತದೆ. ಇದಲ್ಲವೆ ನಮಗೆ ಬೇಕಾದದ್ದು?

★

# ಕಾವ್ಯಶಾಸ್ತ್ರ ವಿನೋದೇನ....

– ಬಿಂಡಿಗನವಿಲೆ ಭಗವಾನ್
ಉಪನ್ಯಾಸಕರು,
ದೊಡ್ಡಬಳ್ಳಾಪುರ.

ಶಿವಮೊಗ್ಗದಿಂದ ಬೆಂಗಳೂರಿಗೆ ಬಸ್ಸಿನಲ್ಲಿ ಹೊರಟ್ಟಿದ್ದೆ. ನನ್ನ ಹಿಂಬದಿಯ ಸೀಟನಲ್ಲಿ ಮೂರು ಮಂದಿ ಕುಳಿತಿದ್ದರು. ಮಾತಿಗಿಳಿದಿದ್ದೇ ಇಳಿದಿದ್ದು. ಆ ಗ್ರಹಣ ಬಿಟ್ಟಿದ್ದು ಬಸ್ಸು ಬೆಂಗಳೂರು ಬಸ್ ನಿಲ್ದಾಣ ಮುಟ್ಟಿದಾಗಲೇ! ಅಕ್ಷರಮಟ್ಟಿಗೆ ಮಾತು, ಮಾತು, ಬರೀ ಮಾತು. ನನ್ನನ್ನೂ ಸೇರಿದಂತೆ ಅವರತ್ತ ಮಾತು ಮೆಲುಧ್ವನಿಯಲ್ಲಿರಲಿ ಎಂದು ಕೆಂಗಣ್ಣು ಬಿಟ್ಟವರು ಹಲವರಿದ್ದರು. ಇಡೀ ಬಸ್ಸಿಗೆಲ್ಲ ಕೇಳುವಂತೆ ಗಟ್ಟಿಯಾಗಿ ಸಂಭಾಷಿಸುವುದು ಎಷ್ಟೊಂದು ಪರಿಪೀಡನೆಯಲ್ಲವೆ? ಈ ಪ್ರವೃತ್ತಿ ತನಗೂ ಕೇಡು, ಇತರರಿಗೂ ಕೇಡು ಎನ್ನುವುದನ್ನು ವೃಥಾ ಮಾತನಾಡುವವರು ಅರಿಯಬೇಕು. ಹಾಗೊಂದುವೇಳೆ ಮಾತನಾಡುವುದು ಅಗತ್ಯವೆನ್ನಿಸಿದರೆ ಇತರರಿಗೆ ಉಪದ್ರವವಾಗದಂತೆ ಮೆಲ್ಲಗೆ ಮಾತನಾಡಬಹುದಲ್ಲವೆ? ಸಾರ್ವಜನಿಕ ಸ್ಥಳಗಳಲ್ಲಿ ಈ ದಿಸೆಯಲ್ಲಿ ಸ್ವಯಂ ಶಿಸ್ತುಪಾಲನೆ ರೂಢಿಸಿಕೊಳ್ಳುವುದು ನಾಗರಿಕತೆ ಎನಿಸಿಕೊಳ್ಳುತ್ತದೆ. 'ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು' ಎನ್ನುವುದು ಜನಪ್ರಿಯ ಗಾದೆ. ಮಾತು ಬೆಳ್ಳಿಯಾದರೆ; ಮೌನ ಬಂಗಾರವಂತೆ. ಮಾತು ತಿಳಿದವನಿಗೆ ಜಗಳವೇ ಇಲ್ಲವಂತೆ. ದಾಸವರೇಣ್ಯರು ಯಾವಾಗಲೂ ಪರನಿಂದನೆಯಲ್ಲಿ ತೊಡಗುವರನ್ನು 'ಆಚಾರವಿಲ್ಲದ ನಾಲಿಗೆ ನಿನ್ನ ನೀಚ ಬುದ್ಧಿಯ ಬಿಡು' ಎಂದು ಎಚ್ಚರಿಸಿದ್ದಾರೆ. ಶರಣರಂತು ಮಾತು ಹೇಗಿರಬೇಕೆನ್ನುವುದನ್ನು ಸರಳ, ನೇರನುಡಿಗಳಲ್ಲಿ ಬಿಂಬಿಸಿದ್ದಾರೆ. 'ನುಡಿದರೆ ಮುತ್ತಿನ ಹಾರದಂತಿರಬೇಕು, ಮಾಣಿಕ್ಯದ ದೀಪ್ತಿಯಂತಿರಬೇಕು' ... ಮುಂತಾಗಿ ವಿವರಿಸುತ್ತ ನುಡಿಯೊಳಗಾಡಿ ನಡೆದುಕೊಳ್ಳದಿದ್ದರೆ ದೇವರು ಖಂಡಿತವಾಗಿಯೂ ಮೆಚ್ಚಲಾರ ಎನ್ನುತ್ತಾರವರು.

*'ಕಾವ್ಯಶಾಸ್ತ್ರವಿನೋದೇನ ಕಾಲೋಗಚ್ಛತಿ ಧೀಮತಾಮ್*
*ವ್ಯಸನೇನ ಚ ಮೂರ್ಖಾಣಾಂ ನಿದ್ರಯಾ ಕಲಹೇನವಾ'*

ಎಂಬ ಸುಭಾಷಿತ ನಮ್ಮ ಕಣ್ಣು ತೆರೆಸುವಲ್ಲಿ ವಿಶೇಷವಾಗಿ ಯಶಸ್ವಿಯಾಗುತ್ತದೆ. ಮೇಧಾವಿಗಳು ಕಾವ್ಯ, ಶಾಸ್ತ್ರ, ವಿನೋದದಲ್ಲಿ ಕಾಲವನ್ನು ಸದ್ವಿನಿಯೋಗ ಮಾಡಿಕೊಳ್ಳುತ್ತಾರೆ, ಇನ್ನು ಮೂರ್ಖರಾದರೋ ಯಾವುದಾದರೂ ಚಟ ಅಥವಾ ನಿದ್ರೆಯಲ್ಲಿ ಕಾಲಹರಣ ಮಾಡುತ್ತಾರೆನ್ನುವುದು ಇದರ ಅರ್ಥ. ಕಾಲ ಮತ್ತು ಸಾಗರದಲೆ ಯಾರಿಗೂ ಕಾಯುವುದಿಲ್ಲ. ಅವು ನಿರಂತರ, ಅವ್ಯಾಹತ. ಕಾಲ ಹೋದರೆ ಹೋಯಿತು, ಮುತ್ತು ಒಡೆದರೆ ಹೋಯಿತು. ಗಣೇಶನ ಮೂರ್ತಿಯನ್ನು ಅವಲೋಕಿಸಿದರೆ ಮಹತ್ವದ ಸಂದೇಶವೊಂದು ವೇದ್ಯವಾಗುತ್ತದೆ. ವಿಶಾಲವಾದ ಕಿವಿಗಳು, ಆದರೆ ಮಾತನಾಡಲು ಸಾಧ್ಯವೇ ಇಲ್ಲವೆನ್ನುವ ಹಾಗೆ ನೀಳನಾಸಿಕ ಅರ್ಥಾತ್ ಸೊಂಡಿಲು ಆತನಿಗೆ. ಮಾತು ಅತಿ ಕಡಿಮೆ ಇರಬೇಕು, ಶ್ರವಣಕ್ಕೆ ಮಾತ್ರ ಸದಾ ಹಂಬಲಿಸುತ್ತಿರಬೇಕು. ಇದು ಮೋದಕಪ್ರಿಯನ ಮಾರ್ಗ.

ಎಲ್ಲವನ್ನೂ ಕೇಳುವುದಕ್ಕೆ ಯೋಗ್ಯ ಎಂದು ಭಾವಿಸಬಾರದು. ಒಳ್ಳೆಯದನ್ನೇ ಆಲಿಸುವ ರೂಢಿ ಬೆಳೆಸಿಕೊಳ್ಳಬೇಕು. ಒಳ್ಳೆಯ ಸುಭಾಷಿತವೊಂದು ಹೀಗುಂಟು;

*'ಭದ್ರಂ ಕರ್ಣೇಭಿಃ – ಶ್ರುಣುಯಾಮದೇವಾಃ'*

ನಮ್ಮ ಕಿವಿಗಳು ಸರ್ವದಾ ಒಳ್ಳೆಯದನ್ನೇ ಕೇಳಬೇಕು. ನಂತರ ಅದನ್ನು ಮನನಮಾಡಿಕೊಂಡು ತರುವಾಯ ಕಾರ್ಯರೂಪಕ್ಕೆ ತರುವ ಸಂಕಲ್ಪ ಮಾಡಬೇಕು.

ನಮ್ಮಲ್ಲಿ ವಿಚಿತ್ರವೆನ್ನಬಹುದಾದ ನಿಲುವು ಪ್ರಚಲಿತವಿದೆ. ಯಾವಾಗಲೂ ಹಳೆಯದೇ ಸರಿ, ಹೊಸದು ಸರಿಯಲ್ಲ ಎಂಬ ಧೋರಣೆಗೆ ಜೋತುಬೀಳುತ್ತೇವೆ. ನಮ್ಮ ಕಾಲದಲ್ಲಿ ಹೊನ್ನಿನ ಮಳೆಯೇ ಸುರಿಯುತ್ತಿತ್ತು. ಇದೀಗ ಕಾಲ ನರಕಸದೃಶ, ಬರುಬರುತ್ತಾ ಕಾಲ ಕೆಟ್ಟೋಗುತ್ತಿದೆ ಎನ್ನುವ ಮಾತೇ ಎಲ್ಲೆಲ್ಲೂ. ವಾಸ್ತವವಾಗಿ ಈ ತರ್ಕ, ವಾದ ಕೇವಲ ಅಸಂಬದ್ಧವೇ ದಿಟ. ಅದೇ ಸೂರ್ಯ, ಅದೇ ಚಂದ್ರ, ಅದೇ ಭಾನು ಇತ್ಯಾದಿ. ಹೀಗಿರುವಾಗ ಕಾಲ ಯಾರನ್ನು ಏನು ತಾನೆ ಮಾಡೀತು? ಮಹಾಕವಿ ಕಾಳಿದಾಸನ ಉಕ್ತಿಯೊಂದು ಸಾರ್ವಕಾಲಿಕವಾಗಿದ್ದು ಮನೋಜ್ಞವಾಗಿದೆ.

*'ಪುರಾಣಮಿತ್ಯೇವ ನ ಸಾಧು ಸರ್ವಂ*
*ನ ಚಾಪಿ ಕಾವ್ಯಂ ನಮಮಿತ್ಯವದ್ಯಂ*
*ಸಂತಃ ಪರೀಕ್ಷ್ಯ, ಅನ್ಯತರತ್ ಭಜಂತೇ*
*ಮೂಢಃ ಪರಪ್ರತ್ಯಯನೇನ ಬುದ್ಧಿಃ'*

ಹಳೆಯದೆಂದ ಮಾತ್ರಕ್ಕೆ ಉತ್ತಮವೆಂದೇನಲ್ಲ, ಹೊಸದೆಂದ ಮಾತ್ರಕ್ಕೆ ಅದು ತಿರಸ್ಕಾರಾರ್ಹವೆಂದೂ ಅಲ್ಲ. ಪ್ರಾಜ್ಞರು ತಪ್ಪು-ಸರಿ ವಿವೇಚಿಸುತ್ತಾರೆ. ಮೂಢರು ಮತ್ತೊಬ್ಬರು ಹೇಳಿದ್ದನ್ನೇ ಒಪ್ಪಿಕೊಂಡು ಬಿಡುತ್ತಾರೆ.

★





# ಶೂನ್ಯ ಸಂಪಾದನೆಗಳಲ್ಲಿ ಸಿದ್ಧರಾಮ

– ಡಾ. ವಿಠಲರಾವ್ ಗಾಯಕ್ವಾಡ್
ಪ್ರವಾಚಕ, ಭಾಷಾಂತರ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕರ್ನಾಟಕದ ಇತಿಹಾಸದಲ್ಲಿ ೧೨ನೇ ಶತಮಾನ ರಾಜಕೀಯ, ಧಾರ್ಮಿಕ, ಸಾಮಾಜಿಕ ಮತ್ತು ಸಾಹಿತ್ಯಕವಾಗಿ ಸ್ಥಿತ್ಯಂತರವನ್ನು ಉಂಟುಮಾಡಿದ ಕಾಲ, ವೀರಶೈವಯುಗ, ಮತಪ್ರಚಾರಯುಗ, ಬಸವಯುಗ, ವಚನಯುಗ, ನಡುಗನ್ನಡಯುಗ ಇತ್ಯಾದಿ ಹೆಸರುಗಳಿಂದ ಇದನ್ನು ಗುರುತಿಸಲಾಗಿದೆ. ಈ ಕಾಲದಲ್ಲಿ ಬಸವಾದಿ ಪ್ರಮುಖ ಶಿವಶರಣರು ಕ್ರಾಂತಿಯ ಮೂಲಕ ಪರಿವರ್ತನೆಗೆ ನಾಂದಿ ಹಾಡಿದರು. ಧಾರ್ಮಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ, ಅನ್ಯಾಯ, ಅನೈತಿಕತೆ ಮತ್ತು ಅಸಮಾನತೆಗಳು ಪ್ರಕೋಪಾವಸ್ಥೆಗೆ ತಲುಪಿದಂತ ಸ್ಥಿತಿಯದು, ಅಂತದಲ್ಲಿ ಜನತೆ ಅದನ್ನು ತೀವ್ರವಾಗಿ ಪ್ರತಿಭಟಿಸಿ ನಿಂತು ಪ್ರಶ್ನಿಸುವುದರ ಮೂಲಕ ಹೊಸತೊಂದರ ಉದಯಕ್ಕೆ ಟೊಂಕ ಕಟ್ಟಿ ನಿಲ್ಲಬೇಕಾಗುತ್ತದೆ, ಹನ್ನೆರಡನೆಯ ಶತಮಾನದಲ್ಲಿ ಶಿವಶರಣರು ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿಯೇ ಸವಾಲಾಗಿ ನಿಂತು ಹೊಸ ಸಮಾಜವೊಂದರ ನಿರ್ಮಾಣಕ್ಕೆ ಕಾರಣೀಭೂತರಾದರು.



ಪ್ರಶ್ನಾತೀತವಾದುದೇ ಧರ್ಮ **Unquestioned belief** ಎಂಬ ನಂಬಿಕೆಯನ್ನು ಅವರು ಸಾಮಾಜಿಕ ವಿವೇಚನೆಗೆ ಆನುವಾಗಿಸಿದರು. ಮತಧರ್ಮ ತನ್ಮೂಲಕ ಸಾಮಾಜಿಕ ಸಮಸ್ಯೆಗಳಾದ ವರ್ಗ-ಸಮಸ್ಯೆ, ವಿದ್ಯಾಭ್ಯಾಸವೇ ಮೊದಲಾದ ಪ್ರಮುಖ ಸಮಸ್ಯೆಗಳನ್ನು ಹುಟ್ಟು ಹಾಕಿತ್ತು. ಪರಿಣಾಮ ಜೀವನ ಸ್ತಬ್ಧವಾಗಿ ಜನತೆ ತಡವರಿಸುವಂತಾಗಿತ್ತು, ಅಲ್ಲದೆ, ಈ ಸಂದಿಗ್ಧತೆಯಲ್ಲಿ ಅಸಹನೀಯವಾದ ಬದುಕಿಗೆ ನವಚೇತನ ನೀಡಿದವರು ಶಿವಶರಣರು. 'ಕಾಯಕವೇ ಕೈಲಾಸ' ಎಂಬುದು ಅವರ ಮುಖ್ಯ ತತ್ವ, ಮಾನವ ತನ್ನ ಬದುಕಿನಲ್ಲಿ ದೈವಸಾಕ್ಷಾತ್ಕಾರ ಪಡೆಯಲು ಸಂಸಾರ ತ್ಯಜಿಸಬೇಕಾಗಿಲ್ಲ; ದೇಹ ದಂಡಿಸಬೇಕಾಗಿಲ್ಲ; ಸರ್ವಸಂಗ ಪರಿತ್ಯಾಗಿಯಾಗಿ ಕಾಡಿಗೆ ಹೋಗಿ ತಪಸ್ಸುಗೊಳ್ಳಬೇಕಾದುದಿಲ್ಲ. ಸಾಂಸಾರಿಕ ಬದುಕಿನಲ್ಲಿದ್ದೇ ಸದ್ಗತಿ ಪಡೆಯುವುದು ಸಾಧ್ಯ ಎಂದು ಬೋಧಿಸಿದರು. ಜಾತಿ ನಿರ್ಮೂಲನಕ್ಕೆ ಕೈಹಾಕಿದ ಶಿವಶರಣರು ಎಲ್ಲರನ್ನೂ ಸಮಾನವಾಗಿ ಕಂಡು, ಅಂತರಂಗ ಮತ್ತು ಬಹಿರಂಗ 'ಶುದ್ಧತೆ'ಗೆ ಒಡಂಬಡಿಸಿದರು. ಬೋಧನಾ ಮಾರ್ಗವೂ ಆಡು ಭಾಷೆಯಲ್ಲಿದ್ದುದರಿಂದ ಜನತೆ ಸಹಜವಾಗಿಯೇ ಇವರ ಕಡೆ ಸೆಳೆಯಲ್ಪಟ್ಟರು ಕಂಪಿದ್ದಲ್ಲಿ ದುಂಬಿ ಸೆಳೆಯಲ್ಪಡುವಂತೆ.

''ಅತಿಹುಸಿವ ಯತಿ ಹೊಲೆಯ, ಹುಸಿಯದಿಕ ಹೊಲೆಯ ಉನ್ನತ ಯತಿವರನು'' ಎಂಬುದು ಶಿವಶರಣರ ಚಳುವಳಿಯ ಮೂಲ ಚಿಂತನೆಯಾಗಿದೆ. ಎಂತಲೇ ಶಿವಶರಣ ಕ್ರಾಂತಿಯಲ್ಲಿ ಮೇಲುವರ್ಗದವರಂತೇ ಕೆಳವರ್ಗದವರು ಪ್ರಮುಖ ಪಾತ್ರವಹಿಸಲು ಸಾಧ್ಯವಾಯಿತು. ಸ್ಥಾವರ ಲಿಂಗವನ್ನು ತ್ಯಜಿಸಿ ಜಂಗಮ ಆರಾಧನೆಗೆ ಒತ್ತು ನೀಡಿದರು. ಹಿಂದೂ ಧರ್ಮಾದಿ ಪ್ರಮುಖ ಧರ್ಮಗಳು ಅಸ್ಪೃಶ್ಯರನ್ನು ದೇವಾಲಯದಿಂದ ಬಹಿಷ್ಕರಿಸಿದರೆ, ಶಿವಶರಣರಿಂದ ದೇವಾಲಯವೇ ಬಹಿಷ್ಕೃತವಾಯಿತು. ದೇವಭಾಷೆ ಜನಭಾಷೆಯಾಗದಿದ್ದಾಗ ಶಿವಶರಣರು ಜನಭಾಷೆಯನ್ನೇ ದೇವಭಾಷೆಯಾಗಿ ಮಾಡಿದರು, ರಾಜಕೀಯವಾಗಿ ಬಿಜ್ಜಳ ಅನ್ಯಾಯವೆಸಗಿದ್ದರಿಂದ ಶಿವಶರಣರು ರಾಜಕೀಯವನ್ನು ಪ್ರಶ್ನಿಸದಿದ್ದರೂ ಬಿಜ್ಜಳನನ್ನು ಗೌರವಿಸಲಿಲ್ಲ, ಮುಂದೆ ಬಸವ, ಅಲ್ಲಮಾದಿ ಪ್ರಮುಖರಿಂದ ನವಸಮಾಜ ನಿರ್ಮಾಣವಾಯಿತು. ಸಾಮಾಜಿಕವಾಗಿ ಇದೊಂದು ಪ್ರಮುಖ ಸಂಘರ್ಷವಾದ್ದರಿಂದ ಕಲ್ಯಾಣದಲ್ಲಿ ವಿಪ್ಲವವಾಯಿತು. ಇತಿಹಾಸದಲ್ಲಿ ಬಸವಾದಿ ಪ್ರಮುಖರು ಏನಾದರೆಂಬುದು ಯಕ್ಷ ಪ್ರಶ್ನೆಯಾಗಿಯೇ ಉಳಿದಿದೆ. ಹೀಗೆ ವಿಪ್ಲವದ ಅನಂತರ ಶಿವಶರಣರು ಚದುರಿದರು. ಅಲ್ಲದೆ, ಇದೇ ಸರಿಸುಮಾರಿನಲ್ಲಿ ತುರುಕರ ದಂಡಯಾತ್ರೆ ನಡೆದು ಚೇತರಿಸಿಕೊಳ್ಳುತ್ತಿದ್ದ ವೀರಶೈವ ಧರ್ಮಕ್ಕೆ ಮತ್ತೊಂದು ಆಘಾತವಾಯಿತು.

ವಿಜಯವಿದ್ಯಾರಣ್ಯರ ಮಾರ್ಗದರ್ಶನದಂತೆ ಹಿಂದೂ ಧರ್ಮದ ಸಂರಕ್ಷಣೆಗಾಗಿಯೇ ವಿಜಯನಗರ ಸಾಮ್ರಾಜ್ಯ ಸ್ಥಾಪಿತವಾದಾಗ ಚದುರಿ ಹೋಗಿದ್ದ ಶಿವಶರಣರು ಇಲ್ಲಿಗೆ ಬಂದು ಒಗ್ಗೂಡಲಾರಂಭಿಸಿದರು. ಹಿಂದೂ ಧರ್ಮದಂತೆಯೇ ವೀರಶೈವ ಧರ್ಮವು ಈ ಕಾಲದಲ್ಲಿ ಚೇತರಿಸಿಕೊಂಡು ಚದುರಿಹೋಗಿದ್ದ ವಚನ ಸಾಹಿತ್ಯವನ್ನು ಸಕ್ರಮವಾಗಿ ಸಂಗ್ರಹಿಸಿತು. ಈ ಫಲವೇ ಶೂನ್ಯಸಂಪಾದನೆ.

ಈಗ ಲಭ್ಯವಿರುವ ನಾಲ್ಕು ಶೂನ್ಯ ಸಂಪಾದನೆಗಳಲ್ಲಿ ಸಂಪಾದನೆ, ಉಳಿದವು ಪರಿಷ್ಕರಣ ಮಾಡಿದ ಆವೃತ್ತಿಗಳು, ಶಿವಗಣ ಪ್ರಸಾದಿ ಮಹಾದೇವಯ್ಯನವರ ಸಂಯೋಜನೆ ಹಲಗೆ ದೇವ, ಗುಮ್ಮಾಳಾಪುರದ ಸಿದ್ಧಲಿಂಗಯತಿಗಳು ಹಾಗೂ ಗೂಳೂರು ಸಿದ್ಧವೀರಣ್ಣೊಡೆಯರಿಗೆ ಒಂದು ಮಾದರಿಯಾಯಿತು. ಆ ಮೂಲಕ ಅವರು ವೀರಶೈವ ತತ್ವ, ಶರಣರ ಚರಿತ್ರೆಯನ್ನು ವಿಸ್ಮೃತವಾಗಿ ಸಂಪಾದಿಸಿಕೊಟ್ಟರು.

"ರಚನೆಯ ದೃಷ್ಟಿಯಿಂದ ಶೂನ್ಯ ಸಂಪಾದನೆ ಸ್ಥೂಲವಾಗಿ ಕಥಾ ಸಾಹಿತ್ಯಕ್ಕೆ ಸೇರುತ್ತದೆ. ಕಥಾ ಸಾಹಿತ್ಯದಲ್ಲಿ ಎರಡು ಮುಖ್ಯ ರೀತಿಗಳು ಹೀಗೆ ಕಂಡು ಬರುತ್ತವೆ. ಪಾತ್ರಗಳೇ ಮಾತಿನ ಮೂಲಕ ಕಥೆಯನ್ನು ಮುನ್ನಡೆಸುವ First Person Narrative ತಂತ್ರದ ದೃಶ್ಯ ಕಾವ್ಯ, ಪಾತ್ರಗಳ ಪರವಾಗಿ ಕವಿಯೇ ಮಾತನಾಡುತ್ತ ಕಥೆಯನ್ನು ಮುನ್ನಡೆಸುವ Third Person Narrative ತಂತ್ರದ ಶ್ರವ್ಯಕಾವ್ಯ" (ಮಾರ್ಗ ೫೯೭), ಪ್ರಸಾದಿ ಮಹಾದೇವಯ್ಯನ ಶೂನ್ಯ ಸಂಪಾದನೆಯಂತೆಯೇ ಸುಖ ಸಂಪಾದನೆಯ ವಚನಗಳು, ಸಕಲ ಪುರಾತನರ ಸಂಪಾದನೆಯ ವಚನಗಳು, ಸಂಪಾದನೆಯ ಸಾರಾಮೃತ ಎಂದು ಮುಂತಾದ ಸಂಪಾದನೆಗಳೂ ಇವೆ.

ವೀರಶೈವರಲ್ಲಿ ಶೂನ್ಯ, ಬಯಲು ಎಂಬುದು ಹಿಂದು ತತ್ವವನ್ನು (concept) ಒಳಗೊಂಡಿರುವ ಪಾರಿಭಾಷಿಕ ಪದ. ಇದು ಆತ್ಮವಾದದ ಪೂರ್ಣಮಾರ್ಗ ಎಂಬರ್ಥವನ್ನೊಳಗೊಂಡಿದೆ. ಪ್ರತಿ ಮನುಷ್ಯನ ಪರಮ ಗಂತವ್ಯವೇ ಶೂನ್ಯವನ್ನು ಸಂಪಾದಿಸುವುದು. ಇದನ್ನೇ ವೀರಶೈವರು 'ಬಯಲು' ಎಂದು ಕರೆದರು. ಅಂದರೆ ಆಷ್ಟಾವರಣಗಳ ಬೆಲೆಯನ್ನರಿತು ಷಟ್ಸ್ಥಲ ಮಾರ್ಗವಾಗಿ ಉಪಾಸನೆ ಮಾಡಿದ ಸಾಧಕನಿಗೆ ಸಾಧನೆಯ ಅಂತ್ಯದಲ್ಲಿ ಒದಗುವ ಬ್ರಹ್ಮ ಸಾಕ್ಷಾತ್ಕಾರವೆಂಬ ಅರ್ಥದಲ್ಲಿ ಆ ಸಾಕ್ಷಾತ್ಕಾರದ ಅನುಭವ ಎಂಬರ್ಥದಲ್ಲಿ 'ಬಯಲು' ಪದವನ್ನು ನಿರ್ದೇಶಿಸಿದ್ದಾರೆ.

ಬಸವಣ್ಣ, ಪ್ರಭುದೇವ ಮುಂತಾದವರ ವಚನಗಳಲ್ಲಿ ಸಿದ್ಧರಾಮನ ಹೆಸರಿನ ಉಲ್ಲೇಖ ಅವನಿಗೆ ಸಂಬಂಧಿಸಿದ ಹಲವಾರು ಶಾಸನಗಳು ಕರ್ನಾಟಕದಲ್ಲಿ ದೊರೆತಿವೆ. 'ಕಪಿಲಸಿದ್ಧ ಮಲ್ಲಿನಾಥ' ಎಂಬ ಅಂಕಿತದಿಂದ ಈತನ ವಚನಗಳು ರಚನೆಗೊಂಡಿವೆ, ಅವನ ಮೇಲೆ ರಾಘವಾಂಕ 'ಸಿದ್ಧರಾಮ ಚಾರಿತ್ರ್ಯ' ಎಂಬ ಪುರಾಣವನ್ನು ರಚಿಸಿದ್ದಾನೆ. ಬಸವಾದಿಗಳ ಅನಂತರ ಶರಣ ಸಮುದಾಯದಲ್ಲಿ ಪ್ರಮುಖವಾಗಿದ್ದವನು, ಅನುಭವ ಮಂಟಪದಲ್ಲಿ ಈತನದು ಪ್ರಮುಖ ಪಾತ್ರ. ಬಹುಶಃ ಸಿದ್ಧರಾಮನ ಆಗಮನವೇ ಶಿವಶರಣರ ಕ್ರಾಂತಿಗೆ ಉತ್ಸಾಹವನ್ನು, ನವಚೇತನವನ್ನು ತುಂಬಿರಬೇಕು. ಸ್ವತಃ ಕರ್ಮಯೋಗಿಯಾದ ಈತ ಸೊನ್ನಲಿಗೆಯಲ್ಲಿ ತನ್ನ ಶಿಷ್ಯರೊಂದಿಗೆ ಕೂಡಿ ಸ್ವಾರ್ಥರಹಿತವಾಗಿ ಜಗತ್ತಿಗೆ ಉಪಯುಕ್ತವಾದ ಕಾರ್ಯಗಳನ್ನು ಮಾಡುತ್ತಿದ್ದನು.

ಸಿದ್ಧರಾಮನ ಜೀವನವನ್ನು ಕುರಿತಂತೆ ಶೂನ್ಯಸಂಪಾದನಾಕಾರರಲ್ಲಿ ಅಭಿಪ್ರಾಯ ಭೇದವಿದೆ. ಈತ ಶರಣರ ಕಾರ್ಯಕ್ಷೇತ್ರಕ್ಕೆ ಬಂದು ಸೇರುವ ಮೊದಲೇ ಸೊನ್ನಲಿಗೆಯನ್ನು ತನ್ನ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದನು. ಅಲ್ಲಿ ಕೆರೆ, ಅರವಟ್ಟಿಗೆ, ಗುಡಿಗೋಪುರಗಳನ್ನು ಕಟ್ಟಿಸಿದ ಬಗ್ಗೆ ವಿವರಗಳಿವೆ. ಕರ್ಮ ಸಾಧನೆಯಲ್ಲಿ ತನ್ನದೇ ಆದ ಉನ್ನತ ನಿಲುವನ್ನು ಪಡೆದುಕೊಂಡು ಕರ್ಮಯೋಗಿ 'ಯೋಗಃ ಕರ್ಮಸುಕೌಶಲಂ' ಎನಿಸಿದ್ದನು. ಸಿದ್ಧರಾಮನ ಜೀವನ ಕುರಿತಂತೆ ಎರಡನೇ ಶೂನ್ಯಸಂಪಾದನೆಕಾರನು ಇವನು ವಿಷ್ಣುವಿನ ಅವತಾರಿ ಎಂದು ಪರಿಭಾವಿಸಿದ್ದಾನೆ. ಇಂಥ ಕಲ್ಪನೆ ವೀರಶೈವರಲ್ಲಿ ವಿಲಕ್ಷಣವಾದುದು, ರಾಘವಾಂಕ ಇವನು ಶಿವನ ಅವತಾರಿ ಎಂದಿದ್ದಾನೆ. ನಾಲ್ಕನೆಯ ಶೂನ್ಯ ಸಂಪಾದನಾಕಾರನೂ ರಾಘವಾಂಕನನ್ನೇ ಅನುಸರಿಸಿದ್ದಾನೆ. ಶೂನ್ಯಸಂಪಾದನೆಯ ಕೇಂದ್ರ ವ್ಯಕ್ತಿ ಅಲ್ಲಮಪ್ರಭುದೇವರು ಸಿದ್ಧರಾಮನನ್ನು ಭೇಟಿಯಾಗಲು ಸೊನ್ನಲಿಗೆಗೆ ಬರುವಾಗ ಶ್ರೀ ಸಿದ್ಧವೀರಣ್ಣೊಡೆಯರು "ಕೈಲಾಸದಿಂದ ಶ್ರೀ ಪರಮೇಶ್ವರನ ಶುದ್ಧ ಸಾತ್ವಿಕವೆ ಜಗ ಹಿತಾರ್ಥವಾಗಿ ಮರ್ತ್ಯಕ್ಕವತರಿಸಿ, ಸಿದ್ಧರಾಮೇಶ್ವರನೆಂಬಭಿಧಾನದಿಂದ ಕೆರೆಯರವಟ್ಟಿಗೆ ಗುಡಿಗೋಪುರಂಗಳಂ ರಚಿಸುತ್ತಿರುವ" ಎಂದು ಬರೆಯುತ್ತಾರೆ, ಮುಂದಿನವರೆಲ್ಲರೂ ಸಿದ್ಧರಾಮನನ್ನು ಶಿವಾವತಾರಿಯಾಗಿಯೇ ಕಂಡಿದ್ದಾರೆ. ಇಂಥ ಕರ್ಮಯೋಗಿ ಸಿದ್ಧರಾಮ ಲೌಕಿಕ ಕರ್ಮದಲ್ಲಿಯೇ ಮಗ್ನನಾಗಿ ಅದರಾಚೆಯ ನಿತ್ಯ ನಿರಂಜತತ್ವವನ್ನು ಮರೆತಿದ್ದಾಗ ಪ್ರಭುದೇವ ಅದನ್ನು ಅವನಿಗೆ ಅರಿವು ಮಾಡಿಕೊಡುತ್ತಾನೆ. ಶೂನ್ಯ ಸಂಪಾದನೆಯಲ್ಲಿ ಇವರಿಬ್ಬರದು ಮಹಾಸಂಗಮ. ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು ಹೇಳುವಂತೆ 'ಜಂಗಮಪರ್ವತ ಅಲ್ಲಮ ತನ್ನ ಬದುಕಿನುದ್ದಕ್ಕೂ ಇತರರಿಗೆ ದಾರಿದೀಪವಾಗಿದ್ದಾನೆ. ಅವರನ್ನು ಪ್ರಚೋದಿಸಿ ಮತಾಂಧರನ್ನಾಗಿ ಮಾಡಿ ಮೂಲೆಗೆ ಕೂರಿಸಲಿಲ್ಲ; ಅವರಲ್ಲಿ ಸಾಮಾಜಿಕ ಪ್ರಜ್ಞೆ ಬಿತ್ತಿದನು, ಫಲವಾಗಿ ಸಿದ್ಧರಾಮನ ಸಾಧನೆ ಲೌಕಿಕತೆಯಲ್ಲೇ ಮುಗಿಯದೆ ಅಲೌಕಿಕ ಜಗತ್ತಿನತ್ತ ಸಾರಿತು'. ಅಲ್ಲಮ ಸಿದ್ಧರಾಮನನ್ನು ಸಂಧಿಸಲೆಂದು ವಿಡಂಬಿಸುತ್ತಲೇ ಬರುತ್ತಾನೆ.





*ಧರೆಯ ಮೇಲೊಂದು ಪಿರಿದಪ್ಪಸಂತೆಯ ನೆರವಿಗೆ ಬಂದವರನೇನೆಂಬೆನು*
*ಪರಿಪರಿಯ ಭಂಡದ ಭಂಡದ ವ್ಯವಹಾರದೊಳಗೆ ಕೊಡಲಿಲ್ಲ, ಕೊಳಲಿಲ್ಲ, ವೃಥಾ*
*ವಿಳಾಸವಿದೇನೋ ? ಅರೆಮರುಳೆಂಬ ಶಿವನುನೆರೆಮರುಳೆಂಬ ಜಗವ*
*ಹುಟ್ಟಿಸಿದ ಪರಿಯ ಕಂಡು ಬೆರಗಾದೆ ಗುಹೇಶ್ವರಾ !*

(ಸಿದ್ಧವೀರಣ್ಣೊಡೆಯರ ಶೂನ್ಯ ಸಂಪಾದನೆ - ಪುಟ : ೩೭) ಇಂಥ ಸಂತೆಯಲ್ಲಿ ಕೊಳ್ಳುವುದು ಹೆಣ್ಣು, ಹೊನ್ನು, ಮಣ್ಣು ಪಂಚೇಂದ್ರಿಯ ವಿಷಯಗಳ ಭೋಗಭಾಗ್ಯವಿಲಾಸ. ಇಲ್ಲಿನ ಬದುಕೆಲ್ಲ ಸ್ವರ್ಗ, ನರಕಾದಿ ಲೌಕಿಕ ಆಕಾಂಕ್ಷೆಗಳದು. ಇಂಥ ಸಂತೆಯಲ್ಲಿನ ಮಂದಿ ವೃಥಾವಿಳಾಸದಿಂದ ಮರೆಯುತ್ತಿದ್ದಾರೆ. ಇದು ಅರೆಮರಳು ಶಿವನು ಸೃಷ್ಟಿಸಿರುವ ನೆರೆ ಮರುಳು ಜಗತ್ತು ಎಂದು ವಿಡಂಬಿಸುತ್ತಾನೆ. ಈ ಸಂತೆಯ ಮಂದಿಗೆ ಈ ಭವ ಸಮುದ್ರವೇ ಏಕೈಕ ಸದ್ಗತಿಯೇ? ಎಂದು ಸಿದ್ಧರಾಮನ ಸಾಕಾರನಿಷ್ಠ ತತ್ವವನ್ನು ಪ್ರಶ್ನಿಸುತ್ತಾನೆ, ಮತ್ತೆ 'ಕಲ್ಲುಮನೆಯ ಮಾಡಿ, ಕಲ್ಲುದೇವರು ಮಾಡಿ, ಆ ಕಲ್ಲು ಕಲ್ಲಮೇಲೆ ಕೆಡೆದರೆ, ದೇವರೆತ್ತ ಹೋದರೋ?' ಎನ್ನುತ್ತಾನೆ. ಸರ್ವಸ್ವರೂಪಿಯೂ ನಿರಾಕಾರನೂ ಆದ ಭಗವಂತನಿಗೆ ಸಾಕಾರ ನೀಡಿ ರೂಪಿಸಿರುವುದು ಗುಡಿಯ ಬಂಧನವೇ? ಅವನನ್ನು ಕಲ್ಲಿನ ರೂಪಕ್ಕಿಳಿಸುವಂತಾಯಿತೇ ಲೌಕಿಕಕರ್ಮ? ಇಂಥ ಕಲ್ಲುಮನೆ ಉರುಳಿ ಕಲ್ಲುದೇವರ ಮೇಲೆ ಬಿದ್ದರೆ, ದೇವರು ಸತ್ತರೆ, ಓಡಿ ಹೋದರೆ? ಇತ್ಯಾದಿಯಾಗಿ ವಿಡಂಬಿಸುತ್ತಾನೆ. ಅನಂತರ ದೇಹವೇ ದೇಗುಲವಾಗಿರುವಾಗ ಬೇರೆ ದೇವಾಲಯವೇಕೆ? ಈತನದು ಪ್ರಾಣವೇ ಲಿಂಗವಾಗಿರುವಾಗ ಬೇರೆ ಲಿಂಗದ ಆವಶ್ಯಕತೆ ಇದೆಯೇ? ದೇವರೇ ಕಲ್ಲಾದ ಮೇಲೆ ನಾನೇನು? ಎಂದು ಶಿವಾಲಯ ಪ್ರತಿಷ್ಠೆಯನ್ನು ಹಾಸ್ಯ ಮಾಡುತ್ತಾನೆ. ಅನ್ನವನಿಕ್ಕಿ ಅರವಟ್ಟಿಗೆ ಕೆರೆ ಕಟ್ಟಿಸಿದಲ್ಲಿ ಮರಣಾನಂತರ ಸ್ವರ್ಗ ಸಾಧ್ಯವೇ ಹೊರತು ಶಿವನ ನಿಜವು ಸಾಧ್ಯವಿಲ್ಲ. ಹಾಗಾಗಿ ನಿಜವಾದ ಶಿವಸಾನ್ನಿಧ್ಯಕ್ಕೆ ಎಂಥ ಕೆರೆಯ ಅವಶ್ಯಕತೆ ಉಂಟೆಂಬುದನ್ನು ಹೇಳುತ್ತಾನೆ.

*"ತನುವೆಂಬ ಏರಿಂಗೆ ಮನವೆಂಬ ಕಟ್ಟೆ; ಆಚಾರವೆಂಬ ಸೋಪಾನ;*
*ಪರಮಾನಂದವೆಂಬ ಜಲವತುಂಬಿ, ಕೆರೆಯ ಕಟ್ಟಬಲ್ಲವರಾರನು ಕಾಣೆ"*

(ಶೂನ್ಯಸಂಪಾದನೆ-೩೮) ಇಂಥ ಕೆರೆ ಮಾತ್ರ ಸ್ಥಿರವಾದುದು; ಮೇಲಿನವೆಲ್ಲ ಕೇವಲ ಫಲಾಪೇಕ್ಷಿತಗಳು ಎಂದು ವಿಡಂಬಿಸಿ ಕಟ್ಟಿಸುವ ಒಡ್ಡನ ಪ್ರತಾಪವನೇನೆಂಬೆನಯ್ಯಾ ! ಎಂಬ ಕೊರಗು ದನಿಯಲ್ಲಿ ವಿಡಂಬಿಸುತ್ತಾನೆ. ಒಳಗೆ ತೊಳೆದು ಜಲವ ತುಂಬಲರಿಯದ ಆರೆಮರುಳನೇನಾದ ಹೇಳಿರ ?.... ಒಡ್ಡರಾಮಯ್ಯನ ಇರವೆಂತು ಹೇಳಿರ ? ಎಂದು ಲಘುವಾಗಿ ಮಾತನಾಡುತ್ತಾನೆ. ಅಂತರಂಗವನ್ನು ತೊಳೆದು ಬಯಲೆಂಬ ಪರಿಶುದ್ಧ ಜಲವ ತುಂಬಬೇಕಾದದ್ದು ನಿಜವಾದ ನಿಷ್ಠೆ, ಬದಲಾಗಿ ಮೇಘಾವಲಂಬಿತ ಜಲವ ಕೆರೆಗೆ ತುಂಬಿಸಲು ಹೆಣಗಾಡುವ ಒಡ್ಡರಾಮನ ಜೀವನ ರೀತಿಯ ನೋಡಿರ ! ಈ ಮಾತನ್ನು ಕೇಳಿದ, ಸಿದ್ಧನ ಶಿಷ್ಯರು ಸಿಟ್ಟಿಗೆದ್ದು, ಅಲ್ಲಮಪ್ರಭುವನ್ನು ನೋಯಿಸ ಹೋಗಿ ತಾವೆ ನೋವಿಗೀಡಾಗುತ್ತಾರೆ, ಗುರುಹಿರಿಯರು, ಅವರ ಜೀವನದ ಉನ್ನತಿ, ಮಹತ್ವವನ್ನರಿಯದೆ ನೋಯಿಸಿಹೊರಟ ಇವರ ರೀತಿ 'ಕೆಂಡವ ಗೊರಲಿ', ಮುಟ್ಟಿದಂತಾಗುತ್ತದೆ. ಆಗ ತೆರನನರಿಯದ ಸಂಸಾರ ಜೀವಿಗಳು ಮಾಡಿದ ದೋಷ ತಮ್ಮ ನುಂಗಿ, ಆ ಗುರುವಿಗೆ ಉಪಹತಿಯ ಮಾಡುವುದು ನೋಡಾ ಎನ್ನುತ್ತಾನೆ ಅಲ್ಲಮ, ಇಂತಹ ಅಜ್ಞಾನಿಗಳಿಗೆ ಉಪದೇಶಿಸಿರುವ ಸಿದ್ಧರಾಮನಿಗೇ ಇವರ ಪಾಪಗಳು ! 'ತಾನಿಟ್ಟ ಬೇತಾಳ ತನ್ನನೆ ತಿಂದರೆ, ಬೇಕು ಬೇಡವಲುಂಟೆ ?' ಎಂದು ನೊಂದು ನುಡಿಯುತ್ತಾನೆ.

ಇತ್ತ ಅಲ್ಲಮನಿಂದ ಘಾಸಿಗೊಂಡ ಅವರ ಗುಡ್ಡರು ಸಿದ್ಧರಾಮನಲ್ಲಿಗೆ ಓಡಿ ಬಂದು ಯಾರೋ ಇಂದ್ರಜಾಲಿಗನೊಬ್ಬ ನಿಮ್ಮನ್ನು ನಿಂದಿಸಲು ನಾವು ಪ್ರತಿಭಟಿಸಿದೆವು. ಕಲ್ಲುಗುಂಡುಗಳಿಂದ ಅವನಿಗೆ ಹೊಡೆದರೆ ಅವು ತಿರುಗಿ ನಮ್ಮನೆ ತಾಗಿದವೆಂದು ದೂರಿದರು. ಶಿಷ್ಯರ ನೋವು ಆಕ್ರಂದನವನ್ನು ಕಂಡ ಸಿದ್ಧರಾಮ ಕ್ರೋಧಾವಿಷ್ಟನಾಗಿ 'ನಿಮ್ಮವರ ನೋವೇ ಎನ್ನ ನೋವು ನೋಡಾ' ! ಎಂದು ತನ್ನ ಹಣೆಗಣ್ಣನ್ನು ತೆಗೆಯುತ್ತಾನೆ. (ಶೂನ್ಯ ಸಂಪಾದನೆಗಳೆಲ್ಲದರಲ್ಲೂ ಈ ಪ್ರಸಂಗವಿದೆ) ಅವರ ಹಣೆಗಣ್ಣ ಉರಿ ಅಲ್ಲಮನಿಗೆ ತಾಗಲಿಲ್ಲ; ಬದಲಾಗಿ ಊರನ್ನೇ ಸುಡಲಾರಂಭಿಸುತ್ತದೆ. ಮುಂದೆ ಅಲ್ಲಮ 'ಅಘಟಿತರಿಗೆ ಅಘಟಿತರುಂಟು ನೋಡಾ' ಎಂದು ಅದನ್ನು ತನ್ನ ಅಂಗಾಲಲ್ಲಿ ಅಡಗಿಸಿಕೊಳ್ಳುತ್ತಾನೆ. ಸಿದ್ಧರಾಮನ ನೊಸಲಗಣ್ಣುರಿ ಕಾಮದಹನಕ್ಕಿಂತ ಭಿನ್ನವಾದುದು. ಇದು ಯೋಗದ ಉರಿ; ಅಂತೇ ಅಲ್ಲಮನದು ಕೂಡ ಸಾಂಕೇತಿಕ, ಸಿದ್ಧರಾಮನ ಉರಿಯಡಿ ಅಲ್ಲಮನ ಅಂಗಾಲ ಉರಿ ಹೆಚ್ಚಾಗಿ ವ್ಯಾಪಿಸುತ್ತಿರಲು ಅದನ್ನು ಕಂಡ ಸಿದ್ಧರಾಮ ಅಲ್ಲಮ ಶಿವನೆಂದು ಅಂತರಂಗದಲ್ಲಿ ಗ್ರಹಿಸಿ 'ಆಳ್ದನೊಡನೆ ಆಳು ಮುನಿದರೆ, ಆರು ಕೆಡವರು ಹೇಳಾ' ! ಬಯಲತ್ವವನ್ನು ಸಾಧಿಸಿದ ಘನಮಹಿಮ ಅಲ್ಲಮನೆಲ್ಲಿ ತಾನೆಲ್ಲಿ ಅವರಿರ್ವರು ಲಿಂಗ ಪ್ರಭೆಯೊಳಗೆ ನಾನಿಪ್ಪೆನು ಅಹಂಕಾರದ ಪಂಜರದೊಳಗೆ, ಎಂದು ತನ್ನನ್ನು ತಾನೇ ಶಪಿಸಿಕೊಳ್ಳುತ್ತಾನೆ. ತಾನು ಶಿವಸಾಕ್ಷಾತ್ಕಾರಕ್ಕಾಗಿ ಅಡವಿಯಲ್ಲಿ ಇರುಳು ಹಗಲೆನ್ನದೆ ಪರಿತಪಿಸಿದ ರೀತಿ ನೆನಪಾಗುತ್ತದೆ. ಅಂದು ನನ್ನ ಕಂಬನಿಯ ತೊಡೆದು ನಿಜವ ತೋರಿದ ಶಿವನೇ ಇಂದು ನನ್ನಲ್ಲಿಗೆ ಬಂದರೆ ಹುಚ್ಚನಾಗಿ ವರ್ತಿಸಿದೆ, ನನ್ನನ್ನು ಎಚ್ಚರಿಸಿದ ಅವನನ್ನು ಹುಡುಕಿ ಎನ್ನ ಹೃದಯ ಪಂಜರದೊಳಗಿಟ್ಟುಕೊಂಬೆ ಎಂದು ಹೊರಟು ಬರುತ್ತಾನೆ.

ನಿಂದರೆ ನೆಳಲಿಲ್ಲದ ಸುಳಿದರೆ ಹೆಜ್ಜೆಯಿಲ್ಲದ, ಕಾಯವಿದ್ದು ಕಾಯವಿಲ್ಲದಂಥ ಮಹಾನ್ ವ್ಯಕ್ತಿ ಅಲ್ಲಮ, ಅವನನ್ನು ಹುಡುಕುತ್ತಾ ಬಂದ ಸಿದ್ಧರಾಮ ಅವನನ್ನು ಕಂಡು 'ಬರಿ ಕೆಸರಿಂದ ಕೂಡಿದ ಕೆರೆಗೆ ಹೊಳೆ ಹರಿದು ಬಂದಂತಾಯಿತು ನಿಮ್ಮ ಬರುವು' ನನ್ನ 'ಕಂಗಳ ಕತ್ತಲು ಮನದ ಮದ ಇಂದು ಕೋಡಿ ಹರಿದವು' ಎಂದು ತನ್ನ ಅಜ್ಞಾನದ

ವರ್ತನೆಗೆ ಹೇಸಿ ಅವನನ್ನು ಸ್ತುತಿಸುತ್ತಾನೆ. 'ಭೃತ್ಯಾಪರಾಧಃ ಸ್ವಾಮಿನೋ ದಂಡ' ಎಂಬಂತೆ ನಿಮ್ಮ ಬಳಿ ಸಾರಿದ ಮೇಲೆ ಎನ್ನಲ್ಲಿ ದೋಷವಿಲ್ಲ, ರಕ್ಷಿಸಿ ಎಂದು ಪರಿಪರಿಯಾಗಿ ಬೇಡುತ್ತಾನೆ, ತನ್ನ ಅಲ್ಪ ಶಕ್ತಿಯೆದುರು ಪೂರ್ಣ ಶಕ್ತಿಯಾಗಿ ಬಂದು ನಿಂತು ಜ್ಞಾನದ ಜ್ಯೋತಿ ತಂದ ಅಲ್ಲಮನಿಗೆ ಸೋಲುತ್ತಾನೆ ಸಿದ್ಧರಾಮ, ನನ್ನೆಲ್ಲ ನುಡಿ, ಕರ್ಮಗಳಿಗೆ ನೀನೇ ಕಾರಣ ಎಂದು ಹೇಳುತ್ತಾ 'ಎನ್ನ ಸಟೆಯ ಭಕ್ತಿಯೂ ನಿನ್ನ ರೂಪುಕಂಡಯ್ಯಾ' ಎಂದು ಉದ್ಗರಿಸುತ್ತಾನೆ. ಮುಂದೆ ಹಾಲಲದ್ದು ನೀರಲದ್ದು ನೀನೆ ಗತಿ ನೀನೆ ಮತಿ ಎಂಬ ಭಾವ ಅವನಿಂದ ಹೊರ ಹೊಮ್ಮುತ್ತದೆ.

ಸಿದ್ಧರಾಮ ಹೀಗೆ ಕಿಂಕರ ಭಾವದಿಂದ ತನ್ನ ಪಾದಗಳ ಮೇಲೆ ಬಿದ್ದು ಅಳುತ್ತಿರಲು ಕೃಪೆಯಿಂದ ಅವನಿಗೆ ಪ್ರಸನ್ನನಾಗುತ್ತಾನೆ ಅಲ್ಲಮ, ಅವನನ್ನು ಬಿಗಿದಪ್ಪಿಕೊಂಡು ಅವನ ಯೋಗವನ್ನು ಮೆಚ್ಚಿಕೊಂಡು ''ನಿಮ್ಮಲ್ಲಿ ಸನ್ನಿಹಿತವಾಗಿ ನಿಜವನರಿತು ಬೆರೆಸಿದ ಶಿವಯೋಗಿಯ ಕಂಡರೆ, ಎನ್ನ ಮನವು ಅಗಲಲಾರದಯ್ಯಾ; ಎನ್ನತನುವಪ್ಪದಿರಲಾರದಯ್ಯಾ; ಎನ್ನ ಶಬುದ ಹೊಗಳಿದಲ್ಲದೆ ಸೈರಿಸದಯ್ಯಾ; ಗುಹೇಶ್ವರಾ, ನಿಮ್ಮ ಶರಣ ಶಿವಯೋಗಿ ಸಿದ್ಧರಾಮಯ್ಯನನಪ್ಪಿ ಸೊಪ್ಪಳಿದು ನಮೋ ನಮೋ ಎನುತಿರ್ದೆನು'' ಎಂದಿದ್ದಾನೆ.

ಅಲ್ಲಮ ಸಿದ್ಧರಾಮನ ಸಾಧನೆಯ ಅಪೂರ್ಣ ಅರಕೆಯನ್ನು ತುಂಬಿಕೊಡಲು ಬಂದ ಕಾರಣಿಕ ಪುರುಷ. ಅದಕ್ಕಾಗಿ ಆತ ಯೋಗ-ಶಿವಯೋಗದ ರೀತಿಯನ್ನು ಹೇಳುತ್ತಾ, ಹೃದಯ ಕಮಲ ಪತ್ರದಲ್ಲಿನ ಭ್ರಮೆಯನ್ನು ಕಳದಲ್ಲದೆ ಅದು ಸಿದ್ಧಿಸದು, ಮುಂದೆ ದೇಹ ಜೀವದ ಸಂಬಂಧವನ್ನು ಕುರಿತಂತೆ 'ಅಂತರಂಗದರಿವಿಂಗೆ ಆಚಾರವೇ ಕಾಯ, ಆಚಾರಕಾಯವಿಲ್ಲದಡೆ ಅರಿವಿಂಗೆ ಆಶ್ರಯವಿಲ್ಲ, ಎಂದು ಸ್ಪಷ್ಟಪಡಿಸುತ್ತಾನೆ, ಆದಿಕಾಯ, ಅನಾದಿ ಪ್ರಾಣವಾಗಿಪ್ಪ ಯೋಗದ ಭೇದಿಸಿ ತನ್ನೊಳಗೆ ತಾನೆ ತಿಳಿದು ನೋಡಳು, ಸೋಹಂ ಎಂಬುದು ತಾನೆ ಸತ್ಯ ನೋಡಾ, ಕಾಯದೊಡನೆ ಹುಟ್ಟಿ ಕಾಯದೊಡನೆ ಅಳಿವುದಲ್ಲ, ಜೀವಕಾಯ ಜೀವದ ಬೆಸುಗೆಯನ್ನು ಬಿಚ್ಚಿ ತನ್ನೊಳಗಿನ ಸ್ವಯಂ ತನ್ನನ್ನು, ತನ್ನಿಂದಲೇ ಯಾರು ನಾನು ? ಎಂದು ಪ್ರಶ್ನಿಸಿದಲ್ಲಿ ಪ್ರಕೃತಿಯ ಬೀಜದ ಅಜ್ಞಾನ ಪಿಂಡದಲ್ಲಿನ ಅನಾದಿಯೂ ತನ್ನನ್ನೇ ಮರೆತು ಜೀವ ಕಾಯದ ಭೇದವ ಬಿಡಿಸುತ್ತದೆ ಅದೇ ಸತ್ಯ ಮತ್ತು ನಿತ್ಯ ಎಂಬುದು ಅಲ್ಲಮನ ವಿಚಾರ.

ಇಂಥ ಕಾಯ ಜೀವದ ಸಂಬಂಧದಲ್ಲಿ ಲೌಕಿಕ ಫಲಾಪೇಕ್ಷೆಗಳಿಗೆ ಒಳಗಾದುದು ಹೇಗೆ ? 'ಕಾಯವೇ ಲಿಂಗ, ಪ್ರಾಣವೇ ಶರಣನಾದ ಶರಣಂಗೆ, ಬೇರೆ ದೇವಾಲಯದ ಮಾಡಿಸಲೇಕೆ ಹೇಳಾ' ಎಂದು ಅವನ ಅಪೂರ್ಣ ಜ್ಞಾನವನ್ನು ಬೆದಕುತ್ತಾನೆ. ಅದಕ್ಕೆ ನಿನ್ನ ನಿರೂಪವೇ ಇದು, ನಿನ್ನಪ್ಪಣೆ ಇದಲ್ಲವಾದರೆ ನನ್ನ ಜೀವನದ ಕತ್ತಲೆಯನ್ನು ಬಿಡಿಸುವುದು ನಿಮ್ಮ ಧರ್ಮವಲ್ಲವೆ ಎಂಬುದು ಸಿದ್ಧರಾಮನ ಉತ್ತರ.

ಅದನ್ನು ಕೇಳಿದ ಪ್ರಭುದೇವ ಕೆರೆ, ಅರವಟ್ಟಿಗೆಗಳ ರಚನೆ ಪ್ರಾರಂಭಿಕ ಹೆಜ್ಜೆಗಳು, ಅವೇ ಪೂರ್ಣವಲ್ಲ, ಕರ್ಮಕಾಂಡ, ಯೋಗವನ್ನು ಮೀರಿ ನಿಂತು ಅಖಂಡವಾದ ಗೋಹೇಶ್ವರನಲ್ಲಿ ತದ್ಗತವಾಗುವುದು ಪೂರ್ಣತ್ವ ಎಂದು ಜೀವನದ ಪರಮ ಗಂತವ್ಯವ ತತ್ವವನ್ನು ಸಿದ್ಧರಾಮನಿಗೆ ಬೋಧಿಸುತ್ತಾನೆ ಅಲ್ಲಮ, ಇಷ್ಟಕ್ಕೆ ಸುಮ್ಮನಾಗದ ಸಿದ್ಧರಾಮ ಕಾಯಕವೇ ಕೈಲಾಸವಲ್ಲವೆ ! ಹಾಗಾಗಿ 'ಕೃಷಿಯ ಮಾಡಿ ಉಣ್ಣದ, ಹಸಿವು ಹರಿದ ಪರಿ ಇನ್ನೆಂತು ? ಮುಂತಾಗಿ ವಿಚಾರಿಸುತ್ತಾ ಕರ್ಮಯೋಗ ಸಿದ್ಧಾಂತದ ನೆಲೆಯಲ್ಲಿ ಅನೇಕ ಸೂಕ್ಷ್ಮ ಪ್ರಶ್ನೆಗಳನ್ನು ಕೇಳುತ್ತಾನೆ. ಅದಕ್ಕೆ ಪ್ರಭುದೇವನ ಉತ್ತರವೆಂದರೆ ಕರ್ಮಯೋಗವೇ ನಿದ್ದರೂ ಶೂನ್ಯತ್ವಸಾಧಿಸುವಲ್ಲಿ ಪೂರ್ವ ಸಾಧನಗಳಷ್ಟೆ; ಅದೇ ಶೂನ್ಯತ್ವ ಸಾಧನೆಯಲ್ಲ ಎಂಬುದು.

ಅದಕ್ಕೆ ಸಿದ್ಧರಾಮ :

*''ಕೈಯಲ್ಲಿ ಹಿಡಿದು ಕಾಬುದು ಕರ್ಮಪೂಜೆಯಲ್ಲವೆ ? ಮನದಲ್ಲಿ ನೆನೆದು*
*ಮಾಡುವೆದೆಲ್ಲವು ಕಾಯದ ಕರ್ಮವಲ್ಲವೆ ?*
*ಭಾವಶುದ್ಧವನರಿವ ಪರಿ ಇನ್ನಾವುದು''*

(ಶೂನ್ಯ ಸಂಪಾದನೆ : ೫೮) ಕರ್ಮದ ಮೂಲಕವೇ ಸಾಧನೆ ಸಾಧ್ಯವಿಲ್ಲವೆ? ಇದೇ ಭಾವಶುದ್ಧದ ಸಂಕೇತವಲ್ಲವೇ. ಏಕ ನಿಷ್ಠೆಯಿಂದ ಅವನನ್ನೇ ಸ್ಮರಿಸುತ್ತಾ ಮಾಡುವ ಕರ್ಮ ಮನದ ಬಯಲನ್ನು ಸಂಕೇತಿಸುವುದಿಲ್ಲವೇ? ಈ ಮಾತಿಗೆ ಅಲ್ಲಮ ಕರ್ಮವೇ ಜೀವನದ ಪರಮ ಪ್ರಾಣವೆಂದು ಅಲ್ಲಿಯೇ ಮಗ್ನನಾಗಿ ಕರ್ಮದಲ್ಲೇ ಸತ್ತರೆ, ಭಾಗ್ಯವೇನು? ಕರ್ಮದ ಜಾಡ್ಯದಲ್ಲೇ ಬಿದ್ದು ವಸ್ತುವನರಿಯದೆ ಲಿಂಗ ತಾನಾಗದೆ ಪ್ರಾಣಿಸಿದರೆ ಹೇಗೆ? ಸಾಧನೆಯೇ ಸಿದ್ಧಿಯಲ್ಲ; ಹಾದಿಯೇ ಊರಲ್ಲ; ನಿಮ್ಮ ಕರ್ಮಯೋಗ ಹಾದಿಯೇ ಊರೆಂದು ಭ್ರಮಿಸಿ ಎಡೆಯಾಡುವ ಸಂಭ್ರಮದಂತಾಗಿದೆ. ಹಾಗಾಗಿ ಕರ್ಮಭಾವ, ದೇಹ ಮತ್ತು ಪ್ರಾಣದ ಸಂದನ್ನು ಬಿಡಿಸಿ ಸ್ಪಷ್ಟಪಡಿಸುತ್ತಾನೆ. ಆದರೆ ಸಿದ್ಧರಾಮನ ಆದರ್ಶ ನಡೆಯೇನು ಕಡಿಮೆಯಲ್ಲ. ಸ್ಪಷ್ಟ ಆಲೋಚನೆ, ಅರಿವಿನ ಮೂಲಕವೇ ಆತ ಕರ್ಮ ಮಗ್ನವಾಗಿರುವುದು. ಎಂತಲೇ ಅಷ್ಟು ಸುಲಭವಾಗಿ ಪ್ರಭುವಿನ ಮಾತನ್ನು ಒಪ್ಪಿಕೊಳ್ಳದೆ

*''ಭೂಮಿಹಿಂದೆಂದೊಡೆ, ಬೆಳೆವ ವೃಕ್ಷ ಹಲವು ತೆರನುಂಟು*
*ಉದಕ ಒಂದಾದಡೆ ಸವಿಸಾರದ ಸಂಪದ ಬೇರುಂಟು*
*ನಿನ್ನ ಒಳಗು ನಾನಾದಡೆ, ತಾಮಸದ ರಾಗ ವಿರಾಗವಾಗದು*
*ಕಪಿಲಸಿದ್ಧ ಮಲ್ಲಿಕಾರ್ಜುನ ಅಂಶವೆಂಬ ಪುರುಷರತಿ ಕೂಟಸ್ಥವಿಲ್ಲ''*

(ಶೂನ್ಯ ಸಂಪಾದನೆ : ೬೦) 'ಲೋಕೋ ಭಿನ್ನರುಚಿ: ಎಂಬಂತೆ ವೈವಿಧ್ಯವೇ ಜೀವನ. ಇಂಥ ವೈವಿಧ್ಯಮಯ ಜೀವನ ಕ್ರಮದಲ್ಲಿ ಕರ್ಮಯೋಗವೇ ಪರಿಪಕ್ವ ಮಾರ್ಗ. ಜೀವನದ ಮಾಗುವಿಕೆಯಲ್ಲಿ ಇಂಥ ಕರ್ಮಯೋಗಕ್ಕಿಂತ ಭಿನ್ನವಾದ, ಉನ್ನತವಾದ ಮಾರ್ಗವನ್ನು





ನಾನು ಕಂಡಿಲ್ಲ. ಕಾಯಕವೇ ಕೈಲಾಸ ಎಂಬುದೇ ಶ್ರೇಷ್ಠವೆಂಬುದು ನನ್ನ ಅಭಿಮತ ಎನ್ನುತ್ತಾನೆ. ಅದಕ್ಕೆ ಅಲ್ಲಮನ ನಿಲುವು ಭಿನ್ನವಾಗಿದೆ. ಸಿದ್ಧರಾಮನ ಕರ್ಮಯೋಗ ಮಾರ್ಗವನ್ನು ಒಳಗೊಂಡಂತೆ ಅದನ್ನೂ ಮೀರಿ ನಿಂತ ನಿಲುವು ಅಲ್ಲಮನದು. ಅಂಥ ಆದರ್ಶ ನಿಲುವನ್ನು ಸಿದ್ಧರಾಮನಲ್ಲೂ ಉಂಟುಮಾಡಬೇಕೆಂಬುದು ಅವನ ಮುಖ್ಯ ಆಶಯ. ಎಂತಲೇ ಕಬ್ಬು, ಕಲ್ಲು ಮತ್ತು ಸ್ಪರ್ಶಮಣಿಗಳಲ್ಲಿ ಭೇದ ಉಂಟಲ್ಲದೆ ಸಕ್ಕರೆಯ ಕೋಲಿಗೆ, ರತ್ನಕ್ಕೆ ಭೇದವುಂಟೇ? ಒರೆಗಲ್ಲುಂಟೆ? ಕೊನೆಯಲ್ಲಿ ಈ ಮೇಲು ಕೀಳುಗಳೆಂಬ ಸಂದೇಹವಡಗಿ ಒಂದು ನಿಶ್ಚಿತ ನಿಂತಾಗ ಶೂನ್ಯತ್ವ ಸಾಧ್ಯವಾಗುತ್ತದೆ. ಆಗ ನೀನೇ ಗೊಹೇಶ್ವರನಾಗುತ್ತಿಯೇ, ಈಗ ನಿನ್ನಲ್ಲಿರುವ ದಾಸೊಹಂ ಭಾವ ಇಲ್ಲವಾಗಿ ಶಿವೋಹಂ ಭಾವ ಉದಿಸುತ್ತದೆ. ಇದೇ ಜೀವನದ ಪರಮಗಂತವ್ಯ ಎಂದು ಮನನವಾಗುವಂತೆ ಹೇಳುತ್ತಾನೆ. ಈ ವಿಚಾರ ಮನಕ್ಕೆ ನಾಟಿ, ಅದರ ಸಂದನ್ನು ಬಿಡಿಸಿ ಅದನ್ನು ನನಗೆ ಕಾಣಿಸುವಂತೆ ಮಾಡಲು ನೀವೇ ಸರಿಯಾದ ಮಾರ್ಗ ತೋರಿಸಿ ಎಂಬುದು ಆತನ ಬೇಡಿಕೆ. ಅದಕ್ಕೆ ಅಲ್ಲಮ ಪರಬ್ರಹ್ಮವೆಂಬುದು ಕಲ್ಪನಾತೀತ, ಉಪಮಾತೀತ ಅದನ್ನು ಕಾಣಲು ಕಾಮ, ಕ್ರೋಧ, ಆಸೆ, ಆಕಾಂಕ್ಷೆಗಳನ್ನು ಬಿಟ್ಟು ಎತ್ತರದ ನಿಲುವಿನಲ್ಲಿ ನಿಲ್ಲಬೇಕು !

*''ದೇಹಭಾವವಳಿದಲ್ಲದೆ ಜೀವಭಾವವಳಿಯದು*
*ಜೀವ ಭಾವವಳಿದಲ್ಲದೆ ಭಕ್ತಿ ಭಾವವಳವಡದು*
*ಭಕ್ತಿ ಭಾವವಳವಟ್ಟಲ್ಲದೆ ಅರಿವು ತಲೆದೋರದು*
*ಅರಿವು ತಲೆದೋರಿದಲ್ಲದೆ ಕುರುಹು ನಷ್ಟವಾಗದು*
*ಕುರುಹು ನಷ್ಟವಾದಲ್ಲದೆ ಮಾಯೆ ಹಿಂಗದು*
*ಇದು ಕಾರಣ ಕಾಯದ ಜೀವದ ಹೊಲಿಗೆಯಳಿದ ಭೇದವ*
*ತಿಳಿಯಬಲ್ಲರೆ, ಗೋಹೇಶ್ವರ ಲಿಂಗದರಿವು*
*ಸಾಧ್ಯವಾದಪ್ಪುದು ಕಾಣಾ ಸಿದ್ಧರಾಮಯ್ಯ''*

(ಶೂನ್ಯ ಸಂಪಾದನೆ : ೬೧)

ಅನಿತ್ಯ, ಅನಾದಿ, ಪೂರ್ಣತ್ವ ಸಾಧ್ಯವಾಗಬೇಕಾದಲ್ಲಿ ನಿತ್ಯ, ಆದಿ, ಅಪೂರ್ಣತೆಗಳನ್ನು ಮೀರಿ ನಿಲ್ಲಬೇಕು. ಆದಿಯೇ ದೇಹ, ಅನಾದಿಯೇ ನಿರ್ದೇಹ; ಇದು ಅಜಡ, ನಿಷ್ಕಲ, ಅನಾದಿಯೇ ಪ್ರಾಣ, ದೇಹ ಭಾವವನ್ನು ಬಿಟ್ಟಲ್ಲಿ ಇಂಥದು ಸಾಧ್ಯವಾಗುತ್ತದೆ. ಈ ಮೂಲಕ ಭಕ್ತಿಭಾವ ಉಂಟಾಗಿ, ಅರಿವು ತಲೆದೋರಿ ಕಾರ್ಯ ಜೀವದ ಸಂದು ಎಂಥೆಂಬ ಅರಿವಾಗುತ್ತದೆ. ಇವು ಸಾಧ್ಯವಾದ ಮೇಲೆ ತಾನೇ ಶಿವನೆಂಬುದು ತಿಳಿಯಲು ಸಾಧ್ಯ ಎಂಬುದನ್ನು ಸ್ಪಷ್ಟವಾಗಿ ಹೇಳುತ್ತಾನೆ.

ಹಂಸ ಕ್ಷೀರ ನ್ಯಾಯದಂತೆ, ಸರ್ಪ ರಜ್ಜು ನ್ಯಾಯದಂತೆ ಇದರ ರೀತಿ, ಸಿದ್ಧರಾಮ ಅದು ಸಾಧ್ಯವಾಗುವುದು ನಿಮ್ಮಿಂದ ಮಾತ್ರ; ಹಾಗಾಗಿ ನೀವೇ ನನಗೆ ಪರಮಗುರುವೆಂದು ಒಪ್ಪಿಕೊಂಡು ಅವರಿಗೆ ಪೂರ್ಣ ಶರಣಾಗುತ್ತಾನೆ. ಕಾಯ ಜೀವದ ಭೇದವನ್ನು ಬಿಡಿಸುವ ಪರಿಯನ್ನು ಅಲ್ಲಮ ಮುಂದುವರಿಸಿ ಕಾಯ ಹರಿಯದಂತೆ ಕಳವಳದ ಕಾಯ ಲಿಂಗ-ಕಾಯವಾಗದು, ಆದ್ದರಿಂದ ಮನಸ್ಸಿನ ವಿಕಲ್ಪ ಜ್ಞಾನದಿಂದರಿದು ಶುದ್ಧಮಾಡಿಕೊಳ್ಳುವೆನೆಂಬುದು ಮೂರ್ಖತನ, ಗೊಹೇಶ್ವರ ಲಿಂಗದ ಸ್ವರೂಪವನ್ನು ಅರಿತವರು ಮನರಹಿತವಾಗಿರಬೇಕು, ವಾಙ್ಮನೋತೀತವಾದ ಘನವು ವಿಚಾರಕ್ಕೆ ಸಿಲುಕುವುದೇ? ಇಲ್ಲವೆಂದೇ ಗ್ರಾಹ್ಯ. ಮತ್ತೆ ಮತ್ತೆ ಆದ ವಿಚಾರಿಸುವುದು ಅನುಚಿತವೆಂದು ಅರಿತುಕೊಳ್ಳಬೇಕು ಎನ್ನುತ್ತಾನೆ ಅಲ್ಲಮ. ನಿಮ್ಮೊಳಗೆ ಅಡಗಿದ ನುಡಿಯನೊಳಕೊಂಡ ಅರಿವು ಅರಿದರಿದು ಮರೆವ ಪರಿ ಎಂತಯ್ಯಾ? ಇಂಥ ಮಹಾನುಭಾವದ ಪರಿ ಸಾಧ್ಯವೇ ಎಂಬ ಸಿದ್ಧರಾಮನ ಮಾತಿಗೆ, 'ಗೊಹೇಶ್ವರ ಲೀಲೆ ಮಾಬನ್ನಕ್ಕರ, ಉರಿಯೊಳಗಣ ಕರ್ಪುರದಂತಿರಬೇಕು' ಎಂಬುದು ಅಲ್ಲಮನ ಉತ್ತರ, ನಿಜ ಕರ್ಪುರದ ಸುಟ್ಟಲ್ಲಿ ಭಸ್ಮವಿಲ್ಲ; ಇದ್ದಿಲಿಲ್ಲ, ಕುರುಹು ಇಲ್ಲದೆ ಆಚಾರದಿಂದ ನೇರವಾಗಿ ಮುಕ್ತಿಗೆ, ಶಿವೋಹಂಗೆ ಸಾಗಬೇಕು ಎಂಬುದು ಇಲ್ಲಿಯ ಭಾವ.

ಈ ಎಲ್ಲಾ ಉಪದೇಶದಿಂದ ಶಿವಾನುಭಾವದ ಅನುಭವ ಸಾಧ್ಯವಾಹಿತಾದರೂ ಅದನ್ನು ಮೀರಿದ ಅನುಭಾವದ ಪರಿಯನ್ನು ಹೇಗೆ ಸಾಧಿಸುವುದೆಂದು ಸಿದ್ಧರಾಮ ಪ್ರಶ್ನಿಸಿದಾಗ, ಕರಸ್ಥಲ ಲಿಂಗವನ್ನು ತೋರಿಸುತ್ತಾ 'ಗುಹೇಶ್ವರ ಲಿಂಗದಲ್ಲಿ ನಿಜವನೆಯ್ದಿಹನೆಂದರೆ ಕುರುಹುವಿಡಿದು ಕುರುಹುಗಡೆಬೇಕು' ಎನ್ನುತ್ತಾನೆ. ಅದರ ಸೂಕ್ಷ್ಮಭೇದದ ಸ್ಥಿತಿಯನ್ನು ಸಂಗನ ಬಸವಣ್ಣಾದಿಗಳು ಬಲ್ಲರು. ಅವರ ಮೂಲಕ ತಿಳಿಯಬಹುದು ಎಂದು ಅವನನ್ನು ಕಲ್ಯಾಣಾಭಿಮುಖವಾಗಿ ಕರೆತರುತ್ತಾನೆ ಅಲ್ಲಮ. All Roads leads to Rome ಎಂಬಂತೆ ಆ ಕಾಲದ ಅರ್ಥಾತ್ ಹನ್ನೆರಡನೆ ಶತಮಾನದ ಮುಖ್ಯಕೇಂದ್ರ ಕಲ್ಯಾಣ, ಎಲ್ಲ ಪ್ರಭೃತಿಗಳು, ಯತ್ವಿಜರ ಮಾರ್ಗ ಕಲ್ಯಾಣಾಭಿಮುಖವೇ, ಅಕ್ಕಮಹಾದೇವಿಯನ್ನು ಒಳಗೊಂಡಂತೆ ಅನೇಕರನ್ನು ಈ ದಿಶೆಯಲ್ಲಿ ನೋಡಬಹುದಾಗಿದೆ.

ಶೂನ್ಯ ಸಂಪಾದನೆಗಳಲ್ಲಿ ಹೆಚ್ಚು ವಿವಾದಸ್ಪದ ವಿಚಾರವೆಂದರೆ ಸಿದ್ಧರಾಮನ ದೀಕ್ಷಾಪ್ರಸಂಗ. ಸಿದ್ಧರಾಮನಿಗೆ ಲಿಂಗಧಾರಣೆಯಾಯಿತೆ ಇಲ್ಲವೇ ಎಂಬ ಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ. ಇದಕ್ಕೆ ಮುಖ್ಯ ಕಾರಣ ಮೊದಲನೆಯ ಶೂನ್ಯಸಂಪಾದನೆಯಲ್ಲಿ ಈ ಪ್ರಸಂಗವಿಲ್ಲ, ಎಂತಲೇ ಇದು ಪ್ರಕ್ಷಿಪ್ತವೇ ಎಂಬ ಅನುಮಾನ ಬರುತ್ತದೆ. ಅಲ್ಲದೆ, ಶೂನ್ಯಸಂಪಾದನೆಗಳ ಪುನರ್ ಪರಿಷ್ಕರಣಗಳಿಗೆ ಸಿದ್ಧರಾಮನ ಲಿಂಗಧಾರಣೆಯ ವಿಚಾರ ಒಂದು ಪ್ರಮುಖ ಕಾರಣವೂ ಹೌದು, ವಿದ್ವಾಂಸರು ಸ್ಪಷ್ಟವಾಗಿ ಚರ್ಚಿಸಿರುವಂತೆ ಸಿದ್ಧರಾಮ ಮೊದಲಿಗೆ

ಶೈವಧರ್ಮಿಯಾನಾಗಿದ್ದು, ಲಿಂಗಧಾರಣೆಯಾದ ಬಳಿಕ ವೀರಶೈವನಾಗಿರಬಹುದೆಂಬ ಚರ್ಚೆ ಒಪ್ಪಿತವೆನಿಸುತ್ತದೆ.

ಈ ಮೊದಲೇ ಹೇಳಿದಂತೆ ಮೊದಲನೇ ಸಂಪಾದನೆಯಲ್ಲಿ ಸಿದ್ಧರಾಮನ ಲಿಂಗಧಾರಣೆ ಅಥವಾ ದೀಕ್ಷಾ ಪ್ರಸಂಗವಿಲ್ಲ, ಶಿವಗಣಪ್ರಸಾದಿ ಮಹಾದೇವಯ್ಯನವರೇ ತಮ್ಮ ಸಂಗ್ರಹದಲ್ಲಿ ದೋಷವಿದ್ದುದಾದರೆ ಪರಿಷ್ಕರಿಸಲು ನನ್ನ ಒಪ್ಪಿಗೆಯಿದೆ ಎಂದು ಹೇಳಿದ್ದಾರೆ. ಇದು ಮುಂದಿನ ಸಂಪಾದನೆಕಾರರನ್ನು ಪ್ರಭಾವಿಸಿದ ವಿಚಾರ, ಅಲ್ಲದೆ ಸಂಪಾದನೆ ಹೆಚ್ಚು ಹೆಚ್ಚಾಗಿ ನಡೆದಂತೆಲ್ಲ ತಾತ್ವಿಕ ಕೃತಿಯಾಗಿಸುವಲ್ಲಿ ಮುಂದಿನವರು ಪ್ರಯತ್ನಿಸಿದ್ದಾರೆ. ಎಂತಲೇ ದೀಕ್ಷಾ ಪ್ರಸಂಗವನ್ನೇ ಆಧರಿಸಿ ಮುಂದೆ ಮೂರು ಶೂನ್ಯಸಂಪಾದನೆಗಳು ಬಂದವು. ಹೆಚ್ಚು ಪರಿಷ್ಕೃತವಾದುದು ಗೂಳೂರ ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆ ಎಂಬುದು ಗ್ರಾಹ್ಯ.

ಇತ್ತ ಕಲ್ಯಾಣದಲ್ಲಿ ಬಸವಣ್ಣ ಜಾತಕ ಪಕ್ಷಿಯಂತೆ ಅಲ್ಲಮನ ಬರುವಿಕೆಯನ್ನೇ ಹನ್ನೆರಡು ವರ್ಷಗಳಿಂದ ಕಾಯುತ್ತಿರುತ್ತಾನೆ. ತ್ರಿಕಾಲ ಜ್ಞಾನಿಗಳಿಗೆ ಇಂಥ ಮುನ್ನೋಟ ಗೋಚರವಾಗುವುದು ಆಶ್ಚರ್ಯವೇನಲ್ಲ. ಅಂತೇ ಅವನ ಮನದ ಅಭೀಷ್ಟೆಯಂತೆ ಕಲ್ಯಾಣಕ್ಕೆ ಅಲ್ಲಮ ಆಗಮಿಸುತ್ತಾನೆ. ಈ ಮೊದಲೇ ಹೇಳಿದಂತೆ ಅಲ್ಲಮ ಎಲ್ಲರನ್ನು ಶಿವೋಹಂ ಮಾರ್ಗದತ್ತ ನಡೆಸಲೆಂದೇ ಹೊರಟ ಜಂಗಮ ಪರ್ವತ, ಬಸವ, ಚೆನ್ನಬಸವಾದಿಯಾಗಿ ಹಲವಾರು ಜನರು ಇವನ ಮಾರ್ಗದರ್ಶನದಿಂದ ಬಾಳಿನ ಪೂರ್ಣತೆಯನ್ನು ಕಂಡುಕೊಳ್ಳುತ್ತಾರೆ. ಎಂತಲೇ ೧೨ನೇಶತಮಾನದಲ್ಲಿ ಸಾಮಾಜಿಕ ಕ್ಷೇತ್ರದ ನೇತಾರ ಬಸವಣ್ಣವಾದರೆ, ಧಾರ್ಮಿಕ ನೇತಾರ ಅಲ್ಲಮಪ್ರಭು, ತನ್ನ ಬಾಳಿನುದ್ದಕ್ಕೂ ತನ್ನ ಬದುಕಿನ ಆದರ್ಶವನ್ನು ನೆರೆತುಂಬಿದ ನದಿ ಹರಿದು ಎಲ್ಲರಿಗೂ, ಎಲ್ಲದಕ್ಕೂ ಸಂತೈಸುವಂತೆ ಇತರರಿಗೂ ಹಂಚಿ ಅಖಂಡ, ಅದ್ವೈತವನ್ನು ಪ್ರಕಟಿಸಿದವನು ಅಲ್ಲಮ.

ಅಲ್ಲಮ , ಸಿದ್ಧರಾಮನೊಡನೆ ಕಲ್ಯಾಣಕ್ಕೆ ಬಂದಾಗ ಅಲ್ಲಿದ್ದ ಶಾಸನ ಪಾಠವನ್ನು ಓದಿ ( ಇದು ಮೊದಲ ಮೂರು ಶೂನ್ಯ ಸಂಪಾದನೆಗಳಲ್ಲಿಲ್ಲ; ನಾಲ್ಕನೆಯದರಲ್ಲಿ ಮಾತ್ರವಿದೆ, ವಿವರಣಾ ರೀತಿಯನ್ನು ನೋಡಿದರೆ ಡಾ. ಎಂ. ಚಿದಾನಂದಮೂರ್ತಿಯವರು ಗ್ರಹಿಸಿದಂತೆ ಪ್ರಕ್ಷಿಪ್ತವೆನಿಸುತ್ತದೆ). ಸಿದ್ಧರಾಮನಿಗೆ ಬಸವಣ್ಣನ ಬದುಕಿನ ರೀತಿಯನ್ನು ವಿವರಿಸಿ ಹೇಳುತ್ತಾನೆ. ಅಲ್ಲಮನ ಬರುವನ್ನು ತಿಳಿದ ಹಡಪದ ಅಪ್ಪಣ್ಣಗಳು ಬಸವಣ್ಣನಿಗೆ ತಿಳಿಸುತ್ತಾರೆ. ಮುಂದೆ ಅಲ್ಲಮನಿಂದ ಮರುಳ ಶಂಕರದೇವ, ಬಸವಣ್ಣ, ಚೆನ್ನಬಸವಣ್ಣನವರು ಶೂನ್ಯದ ಮಹತ್ವವನ್ನರಿತ ಮೇಲೆ ಸಿದ್ಧರಾಮ ಮಹಾನುಭಾವ ಗೋಷ್ಠಿಯಲ್ಲಿ ಪ್ರಭುದೇವರನ್ನು ಕುರಿತು ನೀವು ನಿಮ್ಮ ಕರಸ್ಥಲದ ಲಿಂಗದ ನಿಜವ ಬಸವರಾಜದೇವರಿಂದ ಹೇಳಿಸುವುದಾಗಿ ಕರೆದು ಕೊಂಡು ಬಂದಿರಿ, ಅದರ ನಿಜವೇನು?

*ಆಯ್ಯಾ, ಕಾಯ ಲಿಂಗವೊ ? ಕಾಯದಲ್ಲಿ ಸಾರಿಪ್ಪ ಲಿಂಗಲಿಂಗವೊ ?*
*ಪ್ರಾಣಲಿಂಗವೊ ? ಪ್ರಾಣದಲ್ಲಿ ಸಾರಿಪ್ಪ ಲಿಂಗಲಿಂಗವೊ ? ಜ್ಞಾನ ಲಿಂಗವೊ?*
*ಜ್ಞಾನದ ಮೊನೆಯಲ್ಲಿ ಬೆಳಗುವ ಲಿಂಗಲಿಂಗವೊ ? ಲಿಂಗಪ್ರಾಣ, ಪ್ರಾಣ*
*ಲಿಂಗವೆಂತೆಂದರಿಯೆನು ನಿಮ್ಮ ಕಾಯದ ಕಲಸ್ಥಲವ ಸಾರಿದ ಲಿಂಗ*
*ಪ್ರಾಣದೊಳಗೆ ವೇಧ್ಯವಾದ ಪರಿಯನುಪದೇಶಿಸಿ ಕೃಪೆಯಮಾಡಾ ಪ್ರಭುವೆ?*
*(ಶೂನ್ಯ ಸಂಪಾದನೆ : ೧೮೧)*

ಯಾವುದು ಲಿಂಗ? ಎಷ್ಟುಲಿಂಗ? ದೇಹಾದಿಗಳು ತಾವೇ ಲಿಂಗವಾಗಿದ್ದರೆ ಬೇರೆ ಲಿಂಗದ ಆವಶ್ಯಕತೆ ಏನು? ಜ್ಞಾನದ ಮೊನೆಯಲ್ಲಿ ಬೆಳಗುವ ಈ ಕರಸ್ಥಲ ಲಿಂಗವನ್ನು ಯಾರು ಕಟ್ಟಿಸಿದರು? ಏಕೆ, ಹೇಗೆ, ಎಲ್ಲಿ ಹುಟ್ಟಿಸಿದರು ? ಇತ್ಯಾದಿ ಧ್ವನಿಯುಕ್ತ ಪ್ರಶ್ನೆಗಳೇ ಇಲ್ಲಿವೆ. ಈ ಬಗೆಗೆ ವಿವರಿಸುವಂತೆ ಬಸವಣ್ಣನಿಗೆ ಹೇಳುತ್ತಾನೆ ಅಲ್ಲಮ, ಬಸವಣ್ಣ ಸಿದ್ಧರಾಮನ ಅಂಗದ ಮೇಲೆ ಲಿಂಗವಿಲ್ಲದ್ದರ ಬಗ್ಗೆ ಆಕ್ಷೇಪಿಸುತ್ತಾ (ಎರಡನೆಯ ಶೂನ್ಯ ಸಂಪಾದನೆಯಲ್ಲಿ ಇದರ ಬಗ್ಗೆ ಆಕ್ಷೇಪಿಸುವವನು ಚೆನ್ನಬಸವಣ್ಣ) ಅಂಗ ಲಿಂಗ ಸಂಬಂಧವಿಲ್ಲದಿರ್ದರ..., ಎನ್ನುವರೆಂದು ಮನಹಿಡಿಯದು ಎಂದು ಹೇಳುತ್ತಾನೆ. ಇದಕ್ಕೆ ಸಿದ್ಧರಾಮ

*''ಬೆಳಗು ಬೆಳಗುಹಳಚುವಲ್ಲಿ, ಕತ್ತಲೆ ಉಳಿಯಬಲ್ಲುದೆ ಆಯ್ಯಾ ?*
*ಶರಣರು ಶರಣರು ಮಹಾನುಭಾವ ಗೋಷ್ಠಿಯಂ ಮಾಡುವಲಿ ಸಂಗದೊಳಿ*
*ರ್ದವರ ಅಜ್ಞಾನವಳಿದು ನಿಜವನೈದುವರಯ್ಯಾ ''*
*(ಶೂನ್ಯ ಸಂಪಾದನೆ ೧೮೨)*

ಬೆಳಕು ಬೆಳಕನ್ನು ತಾಗಿದರೆ ಉದ್ದೀಪನೆಯಾಗಿ ತೀಕ್ಷ್ಣವಾಗುತ್ತದೆ. ಅಂತೆ ನಿಮ್ಮಂಥ ಶರಣರ ಅನುಭಾವದ ನಡುವೆ ಇರುವಾಗ ನಮ್ಮಂಥ ಅಜ್ಞಾನಿಗಳ ಅಜ್ಞಾನವಳಿದು ಜ್ಞಾನಾಂಕುರವಾಗುತ್ತದೆ. ಆಗ ಚೆನ್ನಬಸವಣ್ಣ 'ಅಂಗತ್ರಯವುಳ್ಳವರು ಲಿಂಗತ್ರಯ ಸಂಪನ್ನರಾಗಬೇಕು', ಭೋಗ, ಯೋಗ, ತ್ಯಾಗಾಂಗಳುಳ್ಳವರು ಇಷ್ಟ, ಭಾವ, ಪ್ರಾಣ ಸಂಪನ್ನರಾಗಿರಬೇಕು, ಆದಿಲ್ಲದೆ, ಪೂರ್ಣನಿಲುವು ನಿನಗೆ ಹೇಗೆ ಸಾಧ್ಯವಾಯಿತು ? ಎನ್ನುತ್ತಾನೆ. ಅದಕ್ಕೆ ಸಿದ್ಧರಾಮ ಎನ್ನ ಕಾಯವೇ ಬಸವಣ್ಣನು ಎನ್ನ ಪ್ರಾಣವೇ ಪ್ರಭುದೇವರು ಎಂದುತ್ತರಿಸುವನು.

ಆದರೂ ಲಿಂಗಧಾರಣೆ ಆವಶ್ಯಕ ಎಂಬುದೇ ಚೆನ್ನಬಸವಣ್ಣನ ನಿಲುವು. ಆಗ ಪ್ರಭುದೇವರು ಸಿದ್ಧರಾಮ ಮಿಸುನಿಯ (ಶುದ್ಧಚಿನ್ನ) ಚಿನ್ನವಿದ್ದಂತೆ, ಅಂತಹವನಿಗೆ ಒರೆಗಲ್ಲೇಕೆ ? ಗೊಹೇಶ್ವರ ಲಿಂಗವೇ ಆತನ ಪ್ರಾಣವಾಗಿರುವಾಗ ಲಿಂಗಧಾರಣೆಯಂಥ ಕುರುಹಿನ ಆವಶ್ಯಕತೆಯೇನು? ಮುಂದುವರೆದು





*ಆಕಾಶವನ್ನಡರುವಂಗೆ ಅಟ್ಟಗೋಲ ಹಂಗೇಕೆ? ಸಮುದ್ರವ*
*ದಾಂಟುವಂಗೆ ಹರುಗೋಲ ಹಂಗೇಕೆ? ಸೀಮೆಯ ಮೀರಿದ ನಿಸ್ಸೀಮಂಗೆ*
*ಸಿದ್ಧರಾಮಯ್ಯಂಗೆ ಲಿಂಗವೆಂದೇನು ಹೇಳಾ ಚೆನ್ನಬಸವಣ್ಣಾ ?*

ಎನ್ನುತ್ತಾನೆ.

ಆಕಾಶದೆತ್ತರವನ್ನೇರುವಂಥ ಸಾಮರ್ಥ್ಯವುಳ್ಳ ಧೀಮಂತ ಪುರುಷನಿಗೆ ಕೆಳಗಿನಿಂದ ಆಕಾಶವ ಮುಟ್ಟಲು ಬಳಸಬಹುದೆಂಬ ಕೋಲಿನ ಹಂಗೇಕೆ? ಅದು ಆನಾವಶ್ಯಕ. ಸಮುದ್ರವನ್ನೇ ಲಂಘಿಸಬಲ್ಲ ಸಾಹಸಿಗೆ ಹರುಗೋಲಿನ ಅವಶ್ಯಕತೆಯಾದರೂ ಏನು? (ಮೊದಲ ಶೂನ್ಯಸಂಪಾದನೆಯ ವಿಷಯವಿಷ್ಟು) ಅಂತೇ ತಾನೇ ಗೋಹೇಶ್ವರ ಲಿಂಗವಾಗಿರುವಾಗ ಕುರುಹುವಿಡಿದ ಬೇರೆ ಲಿಂಗವೊಂದುಬೇಕು ಎಂಬ ಹುಚ್ಚು ಏಕೆ ? ಎಂದರೆ ಯಾವುದಕ್ಕಾದರೂ ಒಂದು ಕಾರ್ಯಕಾರಣ ಸಂಬಂಧವಿದೆ. ಉದ್ದೇಶರಹಿತವಾದ ಯಾವುದೇ ಕಾರ್ಯವೂ ಲೋಕದಲ್ಲಿ ಉಪಯುಕ್ತವಲ್ಲ ಎಂಬರ್ಥದಲ್ಲಿ (ಮೊದಲ ಶೂನ್ಯ ಸಂಪಾದನಾ ಕೃತಿಯಲಿಲ್ಲದ ವಚನಗಳು ಮುಂದಿನ ಶೂನ್ಯ ಸಂಪಾದನೆಯಲ್ಲಿ ಬರುತ್ತವೆ. ಗೂಳೂರು ಸಿದ್ಧವೀರಣ್ಣೊಡೆಯರಲ್ಲಿ ಈ ಭಾಗ ಸುದೀರ್ಘವಾಗಿದೆ). ಪಟ ಆಕಾಶವನ್ನೇರಿದರೂ ಮೂಲಸೂತ್ರವಿಲ್ಲದಿರುವುದಿಲ್ಲ; ಅದರ ಸಂಬಂಧ ಕೆಳಗಿದ್ದೆ ಇರುತ್ತದೆ. ಉದ್ದೇಶವಿಲ್ಲದೆ ಯಾವುದೇ ಕಾರ್ಯ ನಡೆಯುವುದಿಲ್ಲ. ಅಂತೆಯೇ 'ಲಿಂಗಸಂಗವಿಲ್ಲದೆ ನಿಸ್ಸಂಗವಾಗಬಾರದು', ಹಾಗಾಗಿ, ಸಾಕಾರವೇ ನಿರಾಕಾರವೆಂದರಿದು ಅಂಗ ಲಿಂಗಸಂಬಂಧವಿಲ್ಲದವರ ಸಂಗಭಂಗ'ಎನ್ನುತ್ತಾನೆ. ಅಲ್ಲದೆ ಸತಿ ಸಂಗದ ಸುಖ ಉನ್ನತವಾದುದೆಂದು ಗ್ರಾಹ್ಯವಾಗಬೇಕಾದಲ್ಲಿ ವಿಧಿನಿಯಮಗಳ ಕ್ರಮಬದ್ಧ ಗಣಸಾಕ್ಷಿ ವಿವಾಹವಾಗಿರಬೇಕು. ಕಣ್ಣು ಕಾಣಿಸುವುದೆಂದರೂ ಕತ್ತಲೆಯಲ್ಲಿ ಸಾಧ್ಯವೇ? ಸೂರ್ಯನ ಸಹಾಯದಿಂದ ನೋಡಿ ನಾನೇ ನೋಡಿದ ಎಂಬ ಲೋಕೋಕ್ತಿಯಾಯಿತು ನಿಮ್ಮ ರೀತಿ. ಹಾಗಾಗಿ 'ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯ ವಿರಲು, ಇಷ್ಟ ಪ್ರಾಣ ಭಾವವೆಂಬ ತ್ರಿವಿಧಲಿಂಗ ಮುಖವ ನೋಡುವುದಿಲ್ಲವೆಂದು' ಹೇಳುತ್ತಾನೆ. ಮೋಲಿಗೆ ಮಾರಯ್ಯ ದಾಸಿಮಯ್ಯಾದಿ ಇತರ ಪ್ರಮುಖರ ಭಾವನೆಯೂ ಅದೆ। 'ಆತ್ಮಜ್ಞಾನದಿಂದ ಶಿವತತ್ವದ ಕಾಬುದು ಹುಸಿ' ಎಂದು ಹೇಳಿ ಇಷ್ಟಲಿಂಗದ ಆವಶ್ಯಕತೆಯನ್ನು ಆವರೂ ಒತ್ತಿಹೇಳುತ್ತಾರೆ. ಕೊನೆಗೆ ಪ್ರಭುದೇವರು ಸಿದ್ಧರಾಮಯ್ಯನಿಗೆ 'ಎಳ್ಳಿಂಗೆ ಪರಿಮಳದ ಕಟ್ಟದಲ್ಲದೆ, ಎಣ್ಣೆಗೆ ಪರಿಮಳವೇದಿಸದು.... ಇಷ್ಟಲಿಂಗ ಸಂಬಂಧಿಯಾದಲ್ಲದೆ, ಪ್ರಾಣಲಿಂಗ ಸಂಬಂಧಿಯಾಗಬಾರದೆಂದು' ಹೇಳುತ್ತಾನೆ. ಒಪ್ಪಿದ ಸಿದ್ಧರಾಮ ಅದನ್ನು ತಮ್ಮ ಶರಣರಿಂದ ಕೃಪೆಮಾಡಿಸು, ಅಜ್ಞಾನ ಸ್ಥಿತಿಯಲ್ಲಿ ನಿನ್ನಿಂದ ಅಪ್ಪಣೆತನಾಗಿ ಕಾಯಕರ್ಮದಲ್ಲಿ ಮಗ್ನನಾಗಿದ್ದೇ, ನೀ ಕರೆದಂತೆ ಬಂದೆ ನಿಮ್ಮಿಚ್ಛೆಯನ್ನು ಮೀರಿದವನಲ್ಲ. ಆದುದರಿಂದ ಪುನಾ ಭವಾಂತರದಲ್ಲಿ ಕಾಪಾಡುವುದು ನಿಮ್ಮ ಧರ್ಮ. ಅಲ್ಲದೆ 'ನುಡಿದಂತೆ ನಡೆವ, ನಡೆದಂತೆ ನುಡಿವ' ಸದ್ಭಕ್ತ ಸದಾಚಾರಯುಕ್ತ ಮಹಾತ್ಮರ ಪಾದವ ಹಿಡಿದು ಬದುಕಿಸಯ್ಯಾ ಎಂದು ಪ್ರಭುವಿನಲ್ಲಿ ಬಿನ್ನೈಸಿಕೊಳ್ಳುತ್ತಾನೆ.

ಮುಂದೆ ಸಿದ್ಧರಾಮನಿಗೆ ಚೆನ್ನಬಸವಣ್ಣ 'ಕಾರ್ಯ ಪ್ರಾಣ ಮನವೆಂಬ ತ್ರಿವಿಧದಲ್ಲಿ ಇಪ್ಪತ್ತೊಂದು ದೀಕ್ಷೆಯಂಮಾಡಿ, ತ್ರಿವಿಧ ಲಿಂಗಧಾರಣಮಂ ಸಂಬಂಧಿಸಲು' ದೀಕ್ಷೆ ಕೊಡುತ್ತಾನೆ. ಚೆನ್ನಬಸವಣ್ಣನನ್ನು ಗುರುವೆಂದು ಗ್ರಹಿಸಿದ ಸಿದ್ಧರಾಮ,

*''ಶುದ್ಧವನರಿದೆ ಚೆನ್ನಬಸವಣ್ಣ ನಿಮ್ಮಿಂದ, ಸಿದ್ಧವನರಿದೆ ಚೆನ್ನಬಸವಣ್ಣ*
*ನಿಮ್ಮಿಂದ, ಪ್ರಸಿದ್ಧವನರಿದೆ ಚೆನ್ನಬಸವಣ್ಣ ನಿಮ್ಮಿಂದ, ಕಪಿಲ ಸಿದ್ಧಮಲ್ಲಿ*
*ಕಾರ್ಜುನಯ್ಯಾ, ಚೆನ್ನಬಸವಣ್ಣ ಗುರುವಾಗಿ ಬಂದು ಎನ್ನ ಜನ್ಮ ಕರ್ಮನ*
*ನಿವೃತ್ತಿಯ ಮಾಡಿದನಯ್ಯಾ '' (ಶೂನ್ಯ ಸಂಪಾದನೆ : ೧೬೬)*

*ತನ್ನ ಜನ್ಮಾಂತರ ರಾಟಾಳವೇ ಚೆನ್ನಬಸವಣ್ಣನಿಂದ ಹರಿಯತೆಂದು ಸ್ತುತಿಸುತ್ತಾನೆ.*

ಸಿದ್ಧರಾಮನನ್ನು ಬಸವಣ್ಣ, ಚೆನ್ನಬಸವಣ್ಣ ಪ್ರಭುದೇವರಾದಿಯಾಗಿ ಎಲ್ಲರು ನಮೋ ನಮೋ ಎಂದು ಹೊಗಳುತ್ತಾರೆ. ಇಂಥ ವ್ಯಕ್ತಿಗಳ ವ್ಯಕ್ತಿತ್ವದ ನಡುವೆ ಇರುವುದೇ ಹಿಂದು ಸುಯೋಗ. ಇಲ್ಲಿನ ಯಾವ ವ್ಯಕ್ತಿಗಳನ್ನು ಗಮನಿಸಿದರೂ ಎಲ್ಲರೂ 'ಎನಗಿಂತ ಕಿರಿಯರಿಲ್ಲ' ಎಂ ಭಾವವುಳ್ಳವರೇ ಆಗಿದ್ದಾರೆ. ಪರಸ್ಪರ ಒಬ್ಬರಿಂದ ಒಬ್ಬರು ತಾವು ಬದುಕಿದೆವೆಂದು ತನ್ನನ್ನುಳಿದು ಇತರರನ್ನು ಕೊಂಡಾಡುತ್ತಾರೆ. Nothing is absolute everything is relative ಎಂಬಮತೆ ಪೂರ್ಣತ್ವಗ್ರಾಹ್ಯವಾಗುವಲ್ಲಿ ಎಲ್ಲರನ್ನೂ ಕಾರಣರೆಂದು ಭಾವಿಸಿದ್ದಾರೆ. ''ಪೂರ್ಣಮದಃ ಪೂರ್ಣಮಿದ ಪೂರ್ಣಾತ್ಪೂರ್ಣಮುದಚ್ಯತೆ'' ಎಂಬುದು ಅವರ ಭಾವ. ಕೊನೆಗೆ ಸಿದ್ಧರಾಮನನ್ನು ಕುರಿತಂತೆ ಚೆನ್ನಬಸವಣ್ಣ :

*''ಹಸು ಹಯನಾಯಿತ್ತು, ಹಸುಮನೆಗೆ ಬಂದಿತ್ತು ಹಸುವ ಕಟ್ಟುವರೆಲ್ಲರ,*
*ಕಟ್ಟಬಂದವರ ಹಿಕ್ಕಲಿಕ್ಕೆಯೆ ತುಳಿಯಿತ್ತು, ಕೂಡಲ ಚೆನ್ನಸಂಗಯ್ಯನಲ್ಲಿ*
*ಹಸುವ ಕಟ್ಟಿದಾತ ನಮ್ಮ ಸಿದ್ಧರಾಮಯ್ಯದೇವರೊಬ್ಬ''*
(ಶೂನ್ಯ ಸಂಪಾದನೆ : ೧೯೭)

ಎಂದು ಕಠಿಣವಾದ ಅವನ ಕರ್ಮಯೋಗದ ಯಶಸ್ಸನ್ನು ಕೊಂಡಾಡುತ್ತಾನೆ. ಮತ್ತೆ ಮುಂದುವರಿದು 'ಕಬ್ಬನಗಿದ ಗಾಣ ಬಲ್ಲುದೆ, ಹಾಲಿನ ಸವಿಯ?' ಎಂದು ಮುಂತಾಗಿ ಹೇಳಿ ನಮ್ಮ ಕೂಡಲಚೆನ್ನಸಂಗಯ್ಯನಲ್ಲಿ ಮಾಯಾ ಕೋಳಾಹಳ ಸಿದ್ಧರಾಮಯ್ಯ ದೇವರಿಗೆ ಅಹೋರಾತ್ರಿ ನಮೋ ನಮೋ ಎಂದು ಬದುಕಿದೆನು ಕಾಣಾ ಪ್ರಭುವೆ ಎಂದು ಕೊಂಡಾಡುತ್ತಾನೆ. ಮುಂದೆ ಅಲ್ಲಮಪ್ರಭುವನ್ನು ಒಳಗೊಂಡಂತೆ ಎಲ್ಲರೂ ಅವನನ್ನು ಕೊಂಡಾಡುತ್ತಾರೆ.

'ಸಂಪ್ರಾಪ್ತೇ ಸನ್ನಿಹಿತೇಕಾಲೇ ನಹಿನಹಿ ರಕ್ಷತೆ' ಕಾಲಕೂಡಿ ಬಂದಾಗ ಯಾರೇನು ಮಾಡಿದರೂ ನಿಲ್ಲುವುದಿಲ್ಲ. ಅಂತೆ ಕರ್ಮಯೋಗಿ ಸಿದ್ಧರಾಮನಿಗೆ ಅಲ್ಲಮನ ಬರುವಿಕೆ ಆವನ ಕರ್ಮಕ್ಕೆ ಒಂದರ್ಥವನ್ನು ತಂದುಕೊಟ್ಟಿತು. ಅದು ಅಹಂ ಅಳಿದು ಶಿವೋಹಂ ಆದ ಬದುಕಿನ ಅರ್ಥ. ಆ ಅರ್ಥದ ನಿಟ್ಟಿನಲ್ಲಿ ಅವನ ಅಹಂಭಾವವಳಿದು ತನ್ನಿಂತಾನೆ ಸ್ವಯಂಭುವಾಗಿ ಬೆಳೆದ ಲೋಕಕ್ಕೆ ಗೋಚರವಾದ. ಇಂಥ ಘನತೆ ಗೇರಿಸಿದ ಅಲ್ಲಮನಂಥ ಧೀಮಂತ ವ್ಯಕ್ತಿತ್ವ ವೀರಶೈವ ಸಾಹಿತ್ಯದಲ್ಲಿ ಅವಿಸ್ಮರಣೀಯ, ಸಾಮಾಜಿಕ, ಧಾರ್ಮಿಕ ಅನಾಚಾರಕ್ಕೆ ಎದುರಾಗಿ ನಿಂತು ವೀರಶೈವವೆಂಬ ಹೆಸರಿನಲ್ಲಿ ಸಂಘಟಿತರಾಗಿ ಸಾಮಾಜಿಕ ಸಮಾನತೆಯನ್ನು ಸಾಧಿಸಿ ಬರಿ ವೀರಶೈವ ಧರ್ಮಕ್ಕಷ್ಟೇ ಏಕೆ ವಿಶ್ವಕ್ಕೇ ಮಾನವ ಸಮಾನತೆಯ ಕಾಣಿಕೆಯನ್ನು ಇತ್ತಿದ್ದಾರೆ. ಇಂಥ ಒಂದು ಉಜ್ವಲ ವ್ಯಕ್ತಿತ್ವ, ವ್ಯಕ್ತಿಗಳಿಂದ ಕೂಡಿದ ಧರ್ಮದ ಸಿದ್ಧಾಂತಗಳು ಮತ್ತೆ ಸೀಮಿತ ಮತ ಧರ್ಮದಲ್ಲೇ ನೆಲೆಗೊಂಡಿದ್ದು ವಿಷಾದಕರ ಸಂಗತಿ. ಕುವೆಂಪು ಅವರು ಹೇಳಿದಂತೆ ಯಾವುದೇ ಧರ್ಮ ನಮ್ಮಲ್ಲಿಗೆ ಬಂದರೂ ಲಿಂಗ ಧರಿಸಿಯೊ, ಜನಿವಾರ ಕಟ್ಟಿಯೋ ಇಲ್ಲವೇ ಗಡ್ಡ ಬಿಟ್ಟು ನಮ್ಮದನ್ನಾಗಿಸಿಕೊಳ್ಳುತ್ತೇವೆಂಬ ಮಾತು ಎಷ್ಟು ಅರ್ಥಗರ್ಭಿತ ವಾಗಿದೆ.

ಒಟ್ಟಾರೆ ಶೂನ್ಯ ಸಂಪಾದನೆ ಕಲ್ಯಾಣವನ್ನು ಮುಖ್ಯವಾಗಿಟ್ಟು ಕೊಂಡು ಅಕ್ಕಮಹಾದೇವಿ, ಸಿದ್ಧರಾಮ, ಏಕಾಂತದ ರಾಮಯ್ಯ ಮೊದಲಾದ ವ್ಯಕ್ತಿಗಳ ಜೀವನ ಸಂಕಥವನ್ನು ಕಟ್ಟಿಕೊಟ್ಟಿದೆ. ಪರಂಪರೆ ಯಿಂದ ತೇಲಿ ಬಂದ ಕಥಾನಕಗಳನ್ನು ಒಗ್ಗೂಡಿಸಿ ಒಂದು ರೂಪಕ್ಕೆ ತಂದಿರಿಸಿದ ವಿಕಾಸಶೀಲ ಮಹಾ ಕಾವ್ಯದಂತೆ ಬೆಳೆದು ಬಂದಿದೆ. ಸಿದ್ಧರಾಮನಂತೆ ಅಕ್ಕಮಹಾದೇವಿ, ಮುಕ್ತಾಯಕ್ಕ, ಆಯ್ದಕ್ಕಿ ಮಾರಯ್ಯ, ನುಲಿಯ ಚಂದಯ್ಯ ಮೊದಲಾದವರ ಕಥನಗಳು ಅರ್ಥಪೂರ್ಣ ವಾಗಿದೆ. ವೀರಶೈವ ಧರ್ಮದ ತಾತ್ವಿಕತೆಯನ್ನು ಅರ್ಥಮಾಡಿಕೊಳ್ಳಲು ಶೂನ್ಯ ಸಂಪಾದನೆ ಹೆಚ್ಚು ಸಹಾಯಕವಾಗುತ್ತದೆ.

### ಗ್ರಂಥ ಋಣ


೧. ಹಿರೇಮಠ ಆರ್.ಸಿ. (ಸಂ) – ಶಿವಗಣ ಪ್ರಸಾದಿ ಮಹಾದೇವಯ್ಯಗಳ, ಶೂನ್ಯ ಸಂಪಾದನೆ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೭೧

೨. ಭೂಸನೂರ ಮಠ, ಸಂ.ಶಿ. (ಸಂ) – ಗೂಳೂರ ಸಿದ್ಧವೀರಣ್ಣೊಡೆಯರ, ಶೂನ್ಯ ಸಂಪಾದನೆ, ರಾವೂರ ಸಿದ್ಧಲಿಂಗೇಶ್ವರ ಮಠ, ಗುಲ್ಬರ್ಗಾ ೧೯೮೬ (ಮೂರನೇ ಮುದ್ರಣ)

೩. ಭೂಸನೂರ ಮಠ, ಸಂ.ಶಿ. – ಶೂನ್ಯ ಸಂಪಾದನೆಯ ಪರಾಮರ್ಶೆ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು - ೧೯೮೩

೪. ತಿಪ್ಪೇರುದ್ರಸ್ವಾಮಿ. ಎಚ್. – ಶೂನ್ಯತತ್ವ ವಿಕಾಸ ಮತ್ತು ಶೂನ್ಯ ಸಂಪಾದನೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು - ೧೯೬೩

೫. ಚಿದಾನಂದಮೂರ್ತಿ ಎಂ. – ಶೂನ್ಯ ಸಂಪಾದನೆಯನ್ನು ಕುರಿತು, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು - ೧೯೮೮

೬. ಕಲಬುರ್ಗಿ. ಎಂ.ಎಂ. – ಮಾರ್ಗ ೧, ನರೇಶ್ ಅಂಡ್ ಕಂಪನಿ, ಬೆಂಗಳೂರು - ೧೯೮೮

೭. ಶ್ರೀನಿವಾಸ ಮೂರ್ತಿ. ಎಂ.ಆರ್. – ವಚನಧರ್ಮಸಾರ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು - ೧೯೬೮.


★

### ಸಾರ್ವಜನಿಕರ ಗಮನಕ್ಕೆ

ದಿನಾಂಕ ೧೪.೧೨.೨೦೦೩ರಂದು ಗುಬ್ಬಿಯಲ್ಲಿ ಸಮಾವೇಶಗೊಂಡಿದ್ದ 'ಶ್ರೀ ಗೌರಿಶಂಕರ ಸ್ವಾಮಿಗಳ ಭಕ್ತಿ ಸಮರ್ಪಣಾ ಸಭೆ'ಯಲ್ಲಿ ಶ್ರೀ
ಬಿ.ಪಿ. ಶ್ರೀನಿವಾಸ (ಬೆಳ್ಳಾವಿ) ಅಧ್ಯಕ್ಷರು, ಜಿಲ್ಲಾ ಜನತಾಪಕ್ಷ, ತುಮಕೂರು ಆದ ನಾನು ಶ್ರೀಗಳವರಿಗೆ ವಾಹನವನ್ನು ಕೊಡಿಸುವುದರ ಸಲುವಾಗಿ
ಸುಮಾರು ರೂ. ೬.೫ ಲಕ್ಷಗಳನ್ನು ದಾನವಾಗಿ ಕೊಡುತ್ತೇ ನೆಂದು ಸಭೆಯಲ್ಲಿ ವಾಗ್ದಾನ ಮಾಡಿದ್ದು ನಿಜ. ಆದರೆ ಸತ್ಯ ಸಂಗತಿ ಸ್ಪಷ್ಟವಾದ ನಂತರ
ಶ್ರೀ ಗೌರಿಶಂಕರ ಸ್ವಾಮಿಗಳು, ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಲ್ಲ ಎಂಬುದನ್ನು ಮನಗಂಡು ಅದೇ ಹಣವನ್ನು ಶ್ರೀ ಸಿದ್ಧಗಂಗಾ ಮಠದಲ್ಲಿ ಆಶ್ರಯ
ಪಡೆದಿರುವ ದೀನದಲಿತ ಬಡ ಮಕ್ಕಳ ದಾಸೋಹಕ್ಕಾಗಿ ತುಂಬಾ ಸಂತೋಷದಿಂದ ನೀಡಲು ಇಚ್ಛಿಸಿದ್ದೇನೆ.
ಗುಬ್ಬಿಯ ಸಭೆಯಲ್ಲಿ ನಾನು ವಾಗ್ದಾನ ಮಾಡುವುದಕ್ಕೆ ಸತ್ಯಸಂಗತಿಯ ಸ್ಪಷ್ಟನೆ ನನಗೆ ಆಗದಿದ್ದುದೇ ಕಾರಣವೆಂದು ತಿಳಿಯ ಬಯಸುತ್ತೇನೆ.
ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ನನ್ನ ಇಂದಿನ ಅಭಿವೃದ್ಧಿಗೆ ಆಶೀರ್ವಾದ ಮಾಡಿರುತ್ತಾರೆ. ಮಹಾನುಭಾವರೆಂದು
ನಂಬಿದ್ದೇನೆ. ಪೂಜ್ಯರ ಲೋಕಕಲ್ಯಾಣ ಕೈಂಕರ್ಯದಲ್ಲಿ ಸೇವೆ ಮಾಡುವ ಅವಕಾಶ ನನ್ನದಾದುದಕ್ಕಾಗಿ ನಾನು ಹರ್ಷಿಸುತ್ತೇನೆ.
ಸಾರ್ವಜನಿಕರು ದಯಮಾಡಿ ನನ್ನ ಭಾವನೆಯನ್ನು ಅರ್ಥಮಾಡಿಕೊಳ್ಳುತ್ತಾರೆ ಎಂದು ಈ ಮೂಲಕ ಸ್ಪಷ್ಟಪಡಿಸುತ್ತೇನೆ.

ಬಿ.ಪಿ. ಶ್ರೀನಿವಾಸ್
ಜಿಲ್ಲಾಧ್ಯಕ್ಷರು, ಜನತಾಪಕ್ಷ, ತುಮಕೂರು ಜಿಲ್ಲೆ





## ಶ್ರೀಮಠದಲ್ಲಿ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ೪೯ನೆಯ ವಾರ್ಷಿಕ ಮಹಾಧಿವೇಶನ : ಒಂದು ವರದಿ

– ಎಚ್.ಎಸ್. ಸಿದ್ಧಗಂಗಪ್ಪ




ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗಸ್ವಾಮಿಗಳವರಿಂದ ಜ್ಯೋತಿ ಬೆಳಗಿಸುವುದರ ಮೂಲಕ ವಾರ್ಷಿಕ ಮಹಾಧಿವೇಶನದ ಉದ್ಘಾಟನೆ.

''ಇಂದು ಶ್ರೀಮಠದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಜಾಸ್ತಿಯಾಗುತ್ತಿದೆ. ದೂರದ ಊರುಗಳಿಂದ ನೂರಾರು ಬಡಮಕ್ಕಳು ಬರುತ್ತಿದ್ದಾರೆ. ಬರಗಾಲದ ಪ್ರಯುಕ್ತ ದೂರದ ಜಿಲ್ಲೆಗಳಾದ ಬೀದರ್, ಗುಲಬರ್ಗಾ, ಬಿಜಾಪುರ, ರಾಯಚೂರು, ಬೆಳಗಾಂ ಮುಂತಾದ ಕಡೆಗಳಿಂದ ಮಕ್ಕಳು ಹೆಚ್ಚು ಬರುತ್ತಿದ್ದಾರೆ. ಆದರೆ ಅವರಿಗೆಲ್ಲ ಶ್ರೀಮಠದಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗುತ್ತಿಲ್ಲ ಎಂಬ ನೋವು ಕಾಡುತ್ತಿದೆ. ನಿಮ್ಮೆಲ್ಲರ ಸಹಕಾರದಿಂದ ಶ್ರೀಮಠ ಪ್ರಗತಿಯತ್ತ ಸಾಗುತ್ತಿದೆ'' ಎಂದು ತ್ರಿವಿಧ ದಾಸೋಹಮೂರ್ತಿ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ನುಡಿದರು.

ಪರಮಪೂಜ್ಯ ಶ್ರೀ ಶ್ರೀಗಳವರು ಡಿಸೆಂಬರ್ ೧೪ರಂದು ಶ್ರೀಮಠದಲ್ಲಿ ನಡೆದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ೪೯ನೆಯ ಸರ್ವಸದಸ್ಯರ ವಾರ್ಷಿಕ ಮಹಾಧಿವೇಶನದ ದಿವ್ಯ ಸಾನ್ನಿಧ್ಯವಹಿಸಿ ಆಶೀರ್ವಚನ ನೀಡಿದರು.

''ಪ್ರಗತಿ ಎಂಬ ಮಾತು ಅರ್ಥವತ್ತಾಗಬೇಕಾದರೆ ಎಲ್ಲಿಯವರೆಗೆ ಜೀವನ ಸೌಕರ್ಯ ಒಬ್ಬ ವ್ಯಕ್ತಿಗೆ ಲಭಿಸುವುದಿಲ್ಲವೋ ಅಲ್ಲಿಯವರೆಗೆ ಪ್ರಗತಿಮಾತು ಅರ್ಥಹೀನವಾಗುತ್ತದೆ. ಸಮಾಜದಲ್ಲಿ ಶಾಂತಿ ನೆಮ್ಮದಿ ನೆಲಸಬೇಕಾದರೆ ಸಾಮರಸ್ಯ ಜೀವನ ನಡೆಸುವಂತಾಗಬೇಕು. ಬಾಹ್ಯ ಸೌಂದರ್ಯಕ್ಕೆ ಬೆಲೆಕೊಡುವಂತೆ ಅಂತರಂಗದ ಸೌಂದರ್ಯಕ್ಕೂ ಮಹತ್ವಕೊಡಬೇಕು'' ಎಂದು ತಿಳಿಸಿದ ಪರಮಪೂಜ್ಯ ಶ್ರೀ ಶ್ರೀಗಳವರು ''ಹೃದಯವಂತಿಕೆ ಇಂದು ಕೆಳಮಟ್ಟಕ್ಕೆ ಹೋಗುತ್ತಿದೆ. ಬಸವಣ್ಣನವರ ಜೀವನ ಸಂದೇಶವನ್ನು ನಾವಿಂದು ಅರ್ಥಮಾಡಿಕೊಂಡು ಜೀವನದಲ್ಲಿ ಅಳವಡಿಸಿಕೊಳ್ಳ



ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಆಶೀರ್ವಚನ

ಅನಾಥ, ಬಡ, ಹಿಂದುಳಿದ, ದೀನದಲಿತರ ವರ್ಗಕ್ಕೆ ಸೇರಿದ ಮಕ್ಕಳಿಗೆ ಶಿಕ್ಷಣ ನೀಡುವ ಉದ್ದೇಶ ನಮ್ಮದು. ಶಿಕ್ಷಣದಿಂದ ವಂಚಿತರಾದ ವರಿಗೆ ಉತ್ತಮ ಶಿಕ್ಷಣ ನೀಡುವಂತಾಗಬೇಕು. ಈ ನಿಟ್ಟಿನಲ್ಲಿ ಶಿಕ್ಷಕರ ಜವಾಬ್ದಾರಿ ಹೆಚ್ಚಿನದಾಗಿದೆ'' ಎಂದು ನುಡಿದ ಪೂಜ್ಯ ಶ್ರೀ ಶ್ರೀಗಳವರು, ''ಮಕ್ಕಳ ಬಗ್ಗೆ ಪ್ರೀತಿ ಇರಬೇಕು. ಅನುಕಂಪ ಇರಬೇಕು ಅವರಿಗೆ ಉತ್ತಮ ಶಿಕ್ಷಣ ನೀಡ ಬೇಕೆಂಬ ಸೇವಾಗುಣ ಇರಬೇಕು. ನಿಮ್ಮ ಕೆಲಸ ವನ್ನು ನಿಷ್ಠೆಯಿಂದ, ಪ್ರಾಮಾಣಿಕತೆ, ದಕ್ಷತೆ ಯಿಂದ ತೃಪ್ತಿಕರವಾಗಿ ಮಾಡಿ' ಎಂದು ಶಿಕ್ಷಕ ಸಮುದಾಯಕ್ಕೆ ಕರೆ ನೀಡಿದರು.

''ಪ್ರಸ್ತುತ ಸಮಾಜದಲ್ಲಿ ದ್ವೇಷ, ಅಸೂಯೆಗಳು ಜಾಸ್ತಿಯಾಗುತ್ತಿದೆ. ಕುಡಿತ ಹಾಗೂ ಆನ್‌ಲೈನ್ ಲಾಟರಿಯಿಂದ ಸಮಾಜ ಹಾಳಾಗುತ್ತಿದೆ' ಎಂದು ವಿಷಾದಿಸಿದರು.

ಪೂಜ್ಯ ಶ್ರೀ ಶ್ರೀಗಳವರು ಈ ಸಂದರ್ಭದಲ್ಲಿ ಒಂದು ಅಪ್ರಿಯವಾದ ವಿಷಯವನ್ನು ಅನಿವಾರ್ಯವಾಗಿ ಪ್ರಸ್ತಾಪಮಾಡ ಬೇಕಾಗಿದೆ ಎಂದು ತಿಳಿಸಿ ಶ್ರೀ ಗೌರಿಶಂಕರ ಸ್ವಾಮಿಗಳವರ ಬಗ್ಗೆ ವಿವರವಾಗಿ ತಿಳಿಸಿದರು. ಇದರಿಂದ ಶ್ರೀಮಠದ ವಾತಾವರಣ ಕಲುಷಿತಗೊಂಡಿತು ಎಂದು ನೊಂದು ನುಡಿದರು. (ಈ ಬಗ್ಗೆ ಪರಮಪೂಜ್ಯ ಶ್ರೀ ಶ್ರೀಗಳವರ ಪತ್ರಿಕಾ ಹೇಳಿಕೆಯನ್ನು ಪ್ರತ್ಯೇಕವಾಗಿ ಕೊಡಲಾಗಿದೆ. ನೋಡಿ : ಪುಟ ೧೪) ಸತ್ಯಾಂಶವನ್ನು ಜನರಿಗೆ ತಿಳಿಸುವ ಗುರುತರದ ಹೊಣೆ ನಿಮ್ಮ ಮೇಲಿದೆ ಎಂದು

ಬೇಕಾಗಿದೆ. ಗುರುಪರಂಪರೆ ಸಮಾಜದ ಉನ್ನತಿಗೆ, ಅಭಿವೃದ್ಧಿಗೆ ಶ್ರಮಿಸಬೇಕಾಗಿದೆ. ಜನರು ತಿಳಿವಳಿಕೆಯುಳ್ಳವರಾಗಬೇಕು. ವಿದ್ಯಾವಂತರಾಗಬೇಕು. ಆಗ ಮಾತ್ರ ಉತ್ತಮ ಸಮಾಜ ನಿರ್ಮಾಣವಾಗಲು ಸಾಧ್ಯ' ಎಂದು ನುಡಿದರು.

''ಪೂಜ್ಯ ಶ್ರೀ ಉದ್ದಾನ ಶಿವಯೋಗಿಗಳು ಮನುಷ್ಯನನ್ನು ಮನುಷ್ಯನನ್ನಾಗಿ ಮಾಡಬೇಕೆಂಬ ಅವಕಾಶ ಕಲ್ಪಿಸಿಕೊಟ್ಟರು. ಅವರ ಅನುಗ್ರಹದಿಂದ ಶ್ರೀಮಠ ಜಾತ್ಯಾತೀತ ಸಂಸ್ಥೆಯಾಗಿ ಬೆಳೆಯಿತು' ಎಂದು ಈ ಸಂದರ್ಭದಲ್ಲಿ ಸ್ಮರಿಸಿದರು.

''ಕಾಲೇಜುಗಳನ್ನು ಕಟ್ಟುವ ಇಚ್ಛೆ ನಮಗಿಲ್ಲ. ಆ ಕೆಲಸವನ್ನು ಸರ್ಕಾರ ಮಾಡುತ್ತಿದೆ. ಆದರೆ ಗ್ರಾಮೀಣ ಪ್ರದೇಶದಲ್ಲಿರುವ


ಡಾ. ಎಂ.ಎನ್. ಚನ್ನಬಸಪ್ಪ — ಶ್ರೀ ಕೆ.ಎಚ್. ಶಿವರುದ್ರಯ್ಯ — ಶ್ರೀ ಹೆಚ್.ಬಿ. ಗಂಗಾಧರಯ್ಯ — ಪ್ರೊ. ಬಿ. ಗಂಗಾಧರಯ್ಯ



ಕ್ಷೇತ್ರವಾರ್ತೆ


ಪರಮಪೂಜ್ಯ ಶ್ರೀ ಶ್ರೀಗಳವರಿಂದ ರಾಜ್ಯೋತ್ಸವ ಸಂದರ್ಭದಲ್ಲಿ ರಾಜ್ಯ ಸರ್ಕಾರದಿಂದ 'ನಾಗರೀಕ ಪ್ರಶಸ್ತಿ' ಪಡೆದ ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಹಾಗೂ ತುಮಕೂರು ಜಿಲ್ಲಾ ಪಂಚಾಯತ್ ಉಪಕಾರ್ಯದರ್ಶಿಗಳೂ ಆದ ಶ್ರೀ ಗೋವಿಂದರಾಜು ಅವರಿಗೆ ಆಶೀರ್ವಾದ.

ತಿಳಿಸಿದ ಪೂಜ್ಯ ಶ್ರೀ ಶ್ರೀಗಳವರು ನಿಮ್ಮೆಲ್ಲರ ಅಭಿಮಾನದಿಂದ, ದೇವರ ಕೃಪೆಯಿಂದ, ಗುರುಗಳ ಆಶೀರ್ವಾದದಿಂದ ಶ್ರೀಮಠ ಉಳಿದುಕೊಂಡಿತು ಎಂದು ತಮ್ಮ ಆಶೀರ್ವಚನದಲ್ಲಿ ತಿಳಿಸಿದರು.

ವಾರ್ಷಿಕ ಮಹಾಧಿವೇಶನವನ್ನು ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು.

ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಪ್ರಾಚಾರ್ಯರು, ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಪ್ರಧಾನ ಕಾರ್ಯದರ್ಶಿಗಳೂ ಆದ ಡಾ. ಎಂ.ಎನ್. ಚನ್ನಬಸಪ್ಪನವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ಶ್ರೀಮಠದ ಬಹುಮುಖಿ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿದರು. ''ಶ್ರೀಮಠ ಇಲ್ಲದೆ ಹೋಗಿದ್ದರೆ, ಪರಮಪೂಜ್ಯರ ಅನುಗ್ರಹ ದೊರೆಯದೆ ಹೋಗಿದ್ದರೆ ನಮ್ಮೆಲ್ಲರ ಭವಿಷ್ಯ ಕಮರಿ ಹೋಗುತ್ತಿತ್ತು'' ಎಂದು ಹೃದಯ ತುಂಬಿ ಮಾತನಾಡಿದರು.

ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘದ ಕಾರ್ಯದರ್ಶಿಗಳಾದ ಶ್ರೀ ಕೆ.ಎಚ್. ಶಿವರುದ್ರಯ್ಯನವರು ಸಂಘದ ವರದಿ ಯನ್ನು ಸಭೆಯ ಮುಂದಿಟ್ಟರು. ಕಳೆದ ಸಾಲಿನಲ್ಲಿ ಸಂಘವು ಮಾಡಿದ ವೆಚ್ಚಕ್ಕೆ ಹಾಗೂ ಮುಂಗಡ ಆಯವ್ಯಯಕ್ಕೆ ಸಭೆ ಸರ್ವಾನುಮತ ದಿಂದ ಅನುಮೋದನೆ ನೀಡಿತು.

ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ವಾರ್ಷಿಕ ಲೆಕ್ಕಪತ್ರಗಳ ವರದಿಯನ್ನು ವಸ್ತುಪ್ರದರ್ಶನ ಸಮಿತಿಯ ಕಾರ್ಯದರ್ಶಿಗಳಾದ ಪ್ರೊ. ಬಿ. ಗಂಗಾಧರಯ್ಯ ಅವರು ಮಂಡಿಸಿ, ಸರ್ವಸದಸ್ಯರ ಅನುಮೋದನೆ ಪಡೆದರು.

'ಸಿದ್ಧಗಂಗಾ' ಮಾಸ ಪತ್ರಿಕೆಯ ಪ್ರಕಾಶಕರಾದ ಶ್ರೀ ಹೆಚ್.ಬಿ. ಗಂಗಾಧರಯ್ಯ ಅವರು ಕಳೆದ ಸಾಲಿನ ಲೆಕ್ಕಪತ್ರಗಳ ವರದಿಯನ್ನು ಮಂಡಿಸಿ ಸಭೆಯ ಅನುಮೋದನೆ ಪಡೆದರು. ಅವರು ಈ ಸಂದರ್ಭದಲ್ಲಿ ಸಿದ್ಧಗಂಗಾ ಮಾಸ ಪತ್ರಿಕೆಗೆ ಹೆಚ್ಚು ಆಜೀವ


ಶ್ರೀ ಬಿ.ನಂ. ಚನ್ನಪ್ಪ — ಶ್ರೀ ಗೋವಿಂದರಾಜು — ಶ್ರೀ ರಂಗಹನುಮಯ್ಯ — ತಗಡೂರು ಶ್ರೀ ವೀರಭದ್ರಯ್ಯ




ಪ್ರಸಿದ್ಧ ಅಂಕಣಕಾರ ಪ್ರೊ. ಎಚ್‌ಎಸ್ಕೆ ಅವರಿಂದ ಉಪನ್ಯಾಸ





ಸದಸ್ಯರನ್ನಾಗಿ ಮಾಡಿದ ಅಭಿಮಾನಿಗಳನ್ನು ಅಭಿನಂದಿಸಿದರು.

ಬೆಂಗಳೂರು ಶಾಖೆಯ ಕಾರ್ಯ ಚಟುವಟಿಕೆಗಳ ಸಂಕ್ಷಿಪ್ತ ಪರಿಚಯವನ್ನು ಶ್ರೀ ರಂಗಹನುಮಯ್ಯ ಅವರು ಮಾಡಿಕೊಟ್ಟರು.

ನಿವೃತ್ತ ಮುಖ್ಯ ಇಂಜಿನಿಯರ್ ಮತ್ತು ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘದ ಬೆಂಗಳೂರು ಶಾಖೆಯ ಉಪಾಧ್ಯಕ್ಷರೂ ಆದ ಶ್ರೀ ಬಿ.ನಂ. ಚನ್ನಪ್ಪನವರು ಮಾತನಾಡಿ ''ಪರಮಪೂಜ್ಯರ ಮೂಲಕ ಭಗವಂತನ ದರ್ಶನ ಮಾಡುತ್ತಿದ್ದೇವೆ. ಅವರ ಕಾರುಣ್ಯದಿಂದ ನಾವಿಂದು ಮನುಷ್ಯರಾಗಿದ್ದೇವೆ. ೧೨ನೇ ಶತಮಾನದ ಕಲ್ಯಾಣದ ವೈಭವವನ್ನು ಓದಿ ತಿಳಿದುಕೊಂಡಿದ್ದವು. ಈಗ ಆ ನೆನಪನ್ನು ಪ್ರತ್ಯಕ್ಷವಾಗಿ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನೋಡುವ ಭಾಗ್ಯ ನಮ್ಮದಾಗಿದೆ. ಇಲ್ಲಿ ಸದ್ದುಗದ್ದಲವಿಲ್ಲದೆ ಶೈಕ್ಷಣಿಕ, ಸಾಮಾಜಿಕ, ಆಧ್ಯಾತ್ಮಿಕ ಹಾಗೂ ದಾಸೋಹಕ್ರಾಂತಿ ನಡೆಯುತ್ತಿದೆ'' ಎಂದು ನುಡಿದರು.

ಪೂಜ್ಯರು ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಒಬ್ಬ ಪರಿಪೂರ್ಣ ವ್ಯಕ್ತಿಯನ್ನಾಗಿ ರೂಪಿಸಲು ಶ್ರಮಿಸುತ್ತಿದ್ದಾರೆ. ಇಲ್ಲಿ ಅಗತ್ಯವಾಗಿ ಬೇಕಾಗಿರುವ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡುವ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗಬೇಕಾಗಿದೆ. ಮಳೆಗಾಲದಲ್ಲಿ ವಿದ್ಯಾರ್ಥಿಗಳ ಸಾಮೂಹಿಕ ಪ್ರಾರ್ಥನೆಗೆ ತೊಂದರೆಯಾಗುತ್ತಿದೆ. ಅದಕ್ಕೊಂಡು ಪ್ರಾರ್ಥನಾ ಮಂದಿರದ ಹಾಗೂ ೨೦೦ ಕೊಠಡಿಗಳ ಒಂದು ವಿದ್ಯಾರ್ಥಿ ನಿಲಯದ ಅಗತ್ಯ ಇದೆ. ಇದಕ್ಕೆ ಸುಮಾರು ಮೂರರಿಂದ ನಾಲ್ಕು ಕೋಟಿ ರೂ.ಗಳು ವೆಚ್ಚವಾಗುವುದೆಂಬ ಅಂದಾಜಿದೆ. ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳು ಇದಕ್ಕಾಗಿ ಪ್ರತಿಯೊಬ್ಬರು ಒಂದು ತಿಂಗಳ ವೇತನವನ್ನು, ನಿವೃತ್ತಿದಾರರು ಒಂದು ತಿಂಗಳ ನಿವೃತ್ತಿ





ವೇತನವನ್ನು ಕೊಡಲು ವಾಗ್ದಾನ ಮಾಡಿದ್ದಾರೆ. ಪರಮಪೂಜ್ಯ ಶ್ರೀ ಶ್ರೀಗಳವರ ಪಟ್ಟಾಧಿಕಾರದ ಪ್ಲಾಟಿನಂ ಮಹೋತ್ಸವದ ಸವಿನೆನಪಿಗಾಗಿ ಪೂಜ್ಯರಿಗೆ ಅರ್ಪಿಸಲು ತೀರ್ಮಾನಿಸಲಾಗಿದೆ. ಈ ಕಾರ್ಯ ೨೦೦೮ರ ವೇಳೆಗೆ ಪೂರ್ಣಗೊಳ್ಳಬೇಕಾಗಿದೆ ಎಂದು ತಿಳಿಸಿದರು.

ಶ್ರೀಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಆಶೀರ್ವಚನ ನೀಡುತ್ತಾ ''ಕಷ್ಟದಲ್ಲಿಯೂ ನಗುಮುಖವನ್ನು ಕಾಣಬಹುದೆಂದರೆ ಪೂಜ್ಯರಲ್ಲಿ ಮಾತ್ರ. ಅವರು ತಮ್ಮ ನೋವುಗಳನ್ನು ಮರೆತು ಸಂತೋಷವನ್ನು ವ್ಯಕ್ತಪಡಿಸುವಂತಹದು ಅವರ ದೊಡ್ಡ ಗುಣ. ಕಷ್ಟವನ್ನು ಮೆಟ್ಟಿನಿಲ್ಲುವ ಶಕ್ತಿ ಪರಮಪೂಜ್ಯರಿಗೆ ಮಾತ್ರ ಇದೆ. ಬಹುದೊಡ್ಡ ಸೇವೆಯನ್ನು ಮಾಡುತ್ತಿರುವ ಪೂಜ್ಯರು ಸಾವಿರಾರು ವಿದ್ಯಾರ್ಥಿಗಳಿಗೆ ಜೀವಂತ ದೀಪಗಳನ್ನು ಹಚ್ಚಿ ಅವರ ಭವಿಷ್ಯವನ್ನು ಉಜ್ವಲಗೊಳಿಸಿದ್ದಾರೆ'' ಎಂದು ತಿಳಿಸಿದರು.

''ನೀವೆಲ್ಲ ಪೂಜ್ಯರ ದರ್ಶನಮಾಡಲು ಬಂದಿದ್ದೀರಿ. ಪೂಜ್ಯರು ಮೂರು ಸಂದರ್ಭಗಳಲ್ಲಿ ಸಂತೋಷವನ್ನು ಅನುಭವಿಸುತ್ತಿದ್ದಾರೆ ಎಂದು ತಿಳಿಸಿದ ಕಿರಿಯ ಶ್ರೀ ಶ್ರೀಗಳವರು ಪೂಜ್ಯರು ಲಿಂಗಾಪೂಜಾನುಷ್ಠಾನದಲ್ಲಿ ಕಾಣುವ ಆನಂದ, ಚಿಕ್ಕಪುಟ್ಟ ಮಕ್ಕಳು ಆಟವಾಡುತ್ತಿವುದನ್ನು ನೋಡಿ ಆನಂದಪಡುವುದು, ಹಳೆಯ ವಿದ್ಯಾರ್ಥಿಗಳ ಮಹಾಧಿವೇಶನದಲ್ಲಿ ಎಲ್ಲರನ್ನು ನೋಡಿ ಸಂತೋಷಪಡುತ್ತಾರೆ'' ಎಂದು ತಿಳಿಸಿದರು.

ಕೃತಜ್ಞತಾ ಭಾವನೆಯಿಂದ ನೀವೆಲ್ಲ ಇಂದು ಇಲ್ಲಿ ಸೇರಿದ್ದೀರಿ. ಪ್ರತಿಯೊಬ್ಬರಿಗೂ ಸ್ಮರಣೆ ಎನ್ನುವಂತಹುದು ಕೃತಜ್ಞತಾಪೂರ್ವಕವಾಗಿ ಬರಬೇಕು. ಕ್ರೂರಪ್ರಾಣಿಗಳಲ್ಲಿಯೂ ಕೃತಜ್ಞತಾ ಭಾವನೆಯನ್ನು ಕಾಣಬಹುದಾದರೆ, ಮನುಷ್ಯನಲ್ಲಿ ಇರಬೇಡವೆ? ಎಂದು ಪ್ರಶ್ನಿಸಿದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಸಿಂಹದ ದೃಷ್ಟಾಂತ ಕಥೆಯನ್ನು ಉದಾಹರಿಸಿದರು.

ಶ್ರೀಮಠದ ಹಳೆಯ ವಿದ್ಯಾರ್ಥಿಗಳು, ಪ್ರಸ್ತುತ ತುಮಕೂರು ಜಿಲ್ಲಾ ಪಂಚಾಯತ್ ಉಪಕಾರ್ಯದರ್ಶಿಗಳು ಆದ ಶ್ರೀ ಗೋವಿಂದರಾಜು ಅವರು ಈ ಸಂದರ್ಭದಲ್ಲಿ ಮಾತನಾಡಿ ''ಇದೊಂದು ತಾಯಿ ಮಕ್ಕಳ ಸಮಾವೇಶ, ಕಷ್ಟದ ದಿನಗಳಲ್ಲಿ ಅನ್ನವನ್ನು, ಶಿಕ್ಷಣವನ್ನು ನೀಡಿ ಪೂಜ್ಯ ಶ್ರೀಗಳು ನಮ್ಮ ಬಾಳಿಗೆ ಜ್ಯೋತಿಯಾಗಿದ್ದಾರೆ'' ಎಂದು ಸ್ವಾಮೀಜಿಯವರ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿದರು.

''ನಾನು ಎರಡು ವರ್ಷಗಳಿಂದ ತಾಯಿಯ ಮಡಿಲಲ್ಲಿಯೇ ಇದ್ದೇನೆ. ನಾನು ನಿಜಕ್ಕೂ ಅದೃಷ್ಟವಂತ. ಪ್ರತಿದಿನ ಹದಿಮೂರು ಸಾವಿರ ಬಾಯಿಗಳಿಗೆ ಪ್ರಸಾದ ನೀಡುತ್ತಿರುವುದು ತುಂಬಾ ಕಷ್ಟದ ಕೆಲಸ'' ಎಂದು ಶ್ರೀ ಶ್ರೀಗಳವರ ಸೇವೆಯನ್ನು ಪ್ರಶಂಸಿದರು. ಶ್ರೀ ಗೋವಿಂದರಾಜು ಅವರು 'ಸಿದ್ಧಗಂಗಾ' ಮಾಸ ಪತ್ರಿಕೆಯ ಪ್ರಗತಿಗೆ ಎಲ್ಲರೂ ಸಹಕಾರ ನೀಡಬೇಕೆಂದು, ಪ್ರತಿಯೊಬ್ಬರು ಒಬ್ಬೊಬ್ಬ ಆಜೀವ ಸದಸ್ಯರನ್ನು ಮಾಡಿಸಲು ಮನವಿ ಮಾಡಿದರು.

ಶಿಕ್ಷಣದ ಗುಣಮಟ್ಟ ಸುಧಾರಿಸಬೇಕು. ಈ ನಿಟ್ಟಿನಲ್ಲಿ ನಿವೃತ್ತ ಶಿಕ್ಷಕರು ವಿದ್ಯಾರ್ಥಿಗಳಿಗೆ ಪಾಠಮಾಡಿ ಅವರ ಭವಿಷ್ಯವನ್ನು ಉಜ್ವಲಗೊಳ್ಳುವಂತೆ ಮಾಡಬೇಕು ಎಂದು ಕರೆನೀಡಿದರು.

ಇದೇ. ಸಂದರ್ಭದಲ್ಲಿ ಹಳೆಯ ವಿದ್ಯಾರ್ಥಿಗಳಾದ ತಗಡೂರು ಶ್ರೀ ವೀರಭದ್ರಯ್ಯ, ಶ್ರೀ ಸದಾಶಿವಯ್ಯ ಮಲ್ಲತ್ತಹಳ್ಳಿ, ಶ್ರೀ ರಾಜಶೇಖರಯ್ಯ ಮೊದಲಾದವರು ಮಾತನಾಡಿದರು.

**ವಾರ್ಷಿಕ ಮಹಾಧಿವೇಶನದಲ್ಲಿ ಉದ್ದೇಶಿತ ನೂತನ ವಿದ್ಯಾರ್ಥಿನಿಲಯ ಕಟ್ಟಡ ನಿರ್ಮಾಣಕ್ಕೆ ವಾಗ್ದಾನ ಮಾಡಿದವರ ವಿವರ**

| | | |
|---|---|---|
| ೧. | ೪ ಜನ ೧ ಲಕ್ಷ | ೪,೦೦,೦೦೪.೦೦ |
| ೨. | ೩ ಜನ ೨೫ ಸಾವಿರ | ೭೫,೦೦೩.೦೦ |
| ೩. | ಇಬ್ಬರು ೨೦ ಸಾವಿರ | ೪೦,೦೦೨.೦೦ |
| ೪. | ಒಬ್ಬರು ೧೮ ಸಾವಿರ | ೧೮,೦೦೧.೦೦ |
| ೫. | ೫ ಜನ ೧೫ ಸಾವಿರ | ೭೫,೦೦೫.೦೦ |
| ೬. | ೩೭ ಜನ ೧೦ ಸಾವಿರ | ೩೭,೦೩೭.೦೦ |
| ೭. | ಒಬ್ಬರು ೮ ಸಾವಿರ | ೮,೦೦೧.೦೦ |
| ೮. | ೩ ಜನ ೬ ಸಾವಿರ | ೧೮,೦೦೩.೦೦ |
| ೯. | ೫೨ ಜನ ೫ ಸಾವಿರ | ೨,೬೦,೦೫೨.೦೦ |
| | ಒಟ್ಟು | ೯,೨೧,೦೦೮.೦೦ |

ನಾಡಿನ ಖ್ಯಾತ ಅಂಕಣಕಾರರಾದ ಪ್ರೊ. ಎಚ್‌ಎಸ್ಕೆ ಅವರು ವಾರ್ಷಿಕ ಮಹಾಧಿವೇಶನದಲ್ಲಿ ಭಾಗವಹಿಸಿದ್ದರು. ಅವರು ಸಭೆಯನ್ನುದ್ದೇಶಿಸಿ ಮಾತನಾಡುತ್ತಾ'' ಮನಸ್ಸು ತುಂಬಿಬಂದಾಗ ಮಾತು ಹೊರಡುವುದಿಲ್ಲ. ಮೋಡ ದಟ್ಟವಾದಾಗ ಗಾಳಿ ಬೀಸುವುದಿಲ್ಲ. ಅಂತಹ ಸ್ಥಿತಿ ನನಗಾಗಿದೆ'' ಎಂದು ತಿಳಿಸಿದ

ಪ್ರೊ. ಎಚ್.ಎಸ್.ಕೆ. ಅವರು ''ಅಯಸ್ಕಾಂತ ಶಕ್ತಿ ಪೂಜ್ಯ ಶ್ರೀ ಶ್ರೀಗಳಿಗಿರುವುದರಿಂದ ಪದೇ ಪದೇ ಬಂದು ಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆಯಬೇಕು ಎಂಬ ಹಂಬಲ ಉಂಟಾಗುತ್ತಿದೆ. ಇಡೀ ವಿಶ್ವವೇ ದೇವರ ಸ್ವರೂಪ. ಅಂತಹ ದೈವೀ ಸ್ವರೂಪರು ಪರಮಪೂಜ್ಯ ಶ್ರೀ ಶ್ರೀಗಳವರು. ಜ್ಞಾನ, ಕರ್ಮಯೋಗಿಗಳು. ೨೧ನೇ ಶತಮಾನದ ನಡೆದಾಡುವ ಬಸವೇಶ್ವರರು, ಮಹಾತ್ಮರು, ಅವರಲ್ಲಿ ಒಂದು ಮಹಾಶಕ್ತಿಯಿದೆ. ಜ್ಞಾನ, ಭಕ್ತಿ ಹಾಗೂ ಕರ್ಮಗಳ ಮಹಾಸಂಗಮ ಪೂಜ್ಯ ಶ್ರೀ ಶ್ರೀಗಳವರು'' ಎಂದು ನುಡಿದರು.

''ಪ್ರತಿಯೊಬ್ಬರ ಕಣ್ಣೀರನ್ನು ಒರಸುವವರೆಗೂ ನನಗೆ ಶಾಂತಿಯಿಲ್ಲ; ಸಮಾಧಾನ ಇಲ್ಲ ಎಂದು ಗಾಂಧೀಜಿ ಅವರು ಹೇಳಿದ್ದರು. ಅದರಂತೆ ಪೂಜ್ಯ ಶ್ರೀ ಶ್ರೀಗಳವರು ಸಾವಿರಾರು ಜನರ ಕಣ್ಣೀರನ್ನು ಒರೆಸುತ್ತಿದ್ದಾರೆ'' ಎಂದು ತಿಳಿಸಿದ ಪ್ರೊ. ಎಚ್‌ಎಸ್ಕೆ ಅವರು ''ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘದ ಸುವರ್ಣ ಮಹೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸುವಂತಾಗಬೇಕೆಂದು'' ಕರೆನೀಡಿದರು.

''ಮಕ್ಕಳ ಮನಸ್ಸು ಮುಕ್ತವಾಗಿ ಅರಳುವುದಕ್ಕೆ ಪೂಜ್ಯರು ಕಾರಣರಾಗಿದ್ದಾರೆ. ಆ ಅರಳುವಿಕೆಯನ್ನು ನೋಡುವಲ್ಲಿ ಪೂಜ್ಯ ಶ್ರೀ ಶ್ರೀಗಳವರು ಸಂತೋಷವನ್ನು ಅನುಭವಿಸುತ್ತಾರೆ'' ಎಂದು ಈ ಸಂದರ್ಭದಲ್ಲಿ ತಿಳಿಸಿದರು.

ಬಸವಣ್ಣನವರ ಸಮಾಜದಲ್ಲಿ ಈ ಕನಸನ್ನು ಪರಮಪೂಜ್ಯ ಶ್ರೀ ಶ್ರೀಗಳವರು ನನಸನ್ನಾಗಿ ಮಾಡಲು ಶ್ರಮಿಸುತ್ತಿದ್ದಾರೆ. ಪೂಜ್ಯ ಶ್ರೀ ಶ್ರೀಗಳವರು ಕಣ್ಣಿಗೆ ಕಾಣುವ ದೇವರು. ಎಲ್ಲ ವರ್ಗದ ಜನರಿಗೂ ಶ್ರೀಮಠದಲ್ಲಿ ಸಮಾನ ಅವಕಾಶ ಕಲ್ಪಿಸಿಕೊಡುವುದರ ಮೂಲಕ ಒಂದು ಹೊಸ ಸಮಾಜವನ್ನು ಸೃಷ್ಟಿಮಾಡುತ್ತಿದ್ದಾರೆ'' ಎಂದು ತಿಳಿಸಿದರು.

ಶ್ರೀ ಎಸ್. ಚಂದ್ರಶೇಖರ್ ಅವರ ಶರಣು ಸಮರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

★

### ಶ್ರೀವಾಣಿ

ನೂರು ವರ್ಷ ವ್ಯರ್ಥವಾಗಿ ಬಾಳುವುದಕ್ಕಿಂತ
ಮೂರು ವರ್ಷ ಲೇಸೆನಿಸಿಕೊಂಡು ಬಾಳುವ ಇಚ್ಛೆ
ಮಾನವ ಜನಾಂಗದ್ದಾಗಬೇಕು.

## ಪಂಜಾಬ್ ಸರ್ಕಾರದ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಸಿ.ಜೆ. ಗೋಯಲ್ ಅವರಿಂದ ಉಪನ್ಯಾಸ



ಪಂಜಾಬ್ ಸರ್ಕಾರದ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಸಿ.ಜೆ. ಗೋಯಲ್ ಅವರು ಡಿಸೆಂಬರ್ ೨ರಂದು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯರ ದರ್ಶನ ಭಾಗ್ಯವನ್ನು ಪಡೆದರು. ಅವರು ಇದೇ ಸಂದರ್ಭದಲ್ಲಿ ಸಾಮೂಹಿಕ ಪ್ರಾರ್ಥನೆಯನ್ನು ನೋಡಿ ಸಂತೋಷಪಟ್ಟರು. ಅವರು ವಿದ್ಯಾರ್ಥಿಗಳನ್ನು ಕುರಿತು ಉಪನ್ಯಾಸ ನೀಡುತ್ತಾ:

''ನಿಮ್ಮೆಲ್ಲರನ್ನು ನೋಡಿದಾಗ ನನಗೆ ಭಾರತೀಯ ಸಂಸ್ಕೃತಿಯ ದಿವ್ಯ ದರ್ಶನವಾಗುತ್ತದೆ. ಭಾರತೀಯ ಸಂಸ್ಕೃತಿಯ ಪ್ರತಿರೂಪ ನೀವಾಗಿದ್ದೀರೆಂದು'' ತಿಳಿಸಿದ ಶ್ರೀ ಗೋಯಲ್ ಅವರು ಶ್ರೀ ಮಠದ ಬಹುಮುಖ ಸೇವೆಯನ್ನು ಶ್ಲಾಘಿಸಿದರು. ಎಂಟು ಸಾವಿರ ಜನ ದೀನ, ದಲಿತ, ಬಡ ವಿದ್ಯಾರ್ಥಿಗಳಿಗೆ, ಅದರಲ್ಲೂ ಗ್ರಾಮೀಣ ಪ್ರದೇಶದಿಂದ ಬಂದ ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣ ಹಾಗೂ ಉಚಿತ ವಸತಿ, ಊಟವನ್ನು ನೀಡುತ್ತಿರುವುದನ್ನು ಕೇಳಿ ನನಗೆ ಆಶ್ಚರ್ಯವಾಯಿತು. ನಂಬಲು ಅಸಾಧ್ಯವಾದ ಸಾಧನೆ ಇಲ್ಲಿ ನಡೆದಿದೆ. ಪರಮಪೂಜ್ಯರ ಸೇವೆ ನಿಜಕ್ಕೂ ಅಪೂರ್ವವಾದುದು ಅವರ ಆಶೀರ್ವಾದದ, ಅನುಗ್ರಹದಿಂದ ಶಿಕ್ಷಣ ಪಡೆಯುತ್ತಿರುವ ನೀವೇ ಧನ್ಯರು. ಪೂಜ್ಯರ ದರ್ಶನದಿಂದ ನನ್ನ ಜೀವನ ಪಾವನವಾಯಿತು'' ಎಂದು ತಿಳಿಸಿದರು.

ವರದಿ : ಎಂ. ರೇಣುಕಾರಾಧ್ಯ





## ಶ್ರೀ ಮಹಾಂತೇಶ್ವರ ಗದ್ದುಗೆ ಮಠದಲ್ಲಿ ರಾಷ್ಟ್ರೀಯ ಸೇವಾ ಯೋಜನೆ ಶಿಬಿರ




ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಆಶೀರ್ವಚನ. ವೇದಿಕೆಯಲ್ಲಿ : ಕಂಚಗಲ್ ಬಂಡೇಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಬಸವಲಿಂಗಸ್ವಾಮಿಗಳು ಮತ್ತು ಗದ್ದುಗೆ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಮಹಂತಸ್ವಾಮಿಗಳು

ಕರ್ನಾಟಕ ಸರ್ಕಾರದ ಉದ್ಯೋಗ ಮತ್ತು ತರಬೇತಿ ಇಲಾಖೆ ಹಾಗೂ ಶ್ರೀ ಸಿದ್ಧಗಂಗಾ ಕೈಗಾರಿಕಾ ತರಬೇತಿ ಸಂಸ್ಥೆ, ಕಂಚುಗಲ್ ಬಂಡೇಮಠ ಇವರ ಸಂಯುಕ್ತ ಆಶ್ರಯದಲ್ಲಿ ಎನ್.ಎಸ್.ಎಸ್. ಘಟಕದ ವತಿಯಿಂದ ವಿಶೇಷ ಶಿಬಿರದ ಉದ್ಘಾಟನಾ ಸಮಾರಂಭ ದಿನಾಂಕ ೩.೧೨.೨೦೦೩ರಂದು ಶ್ರೀ ಮಹಾಂತೇಶ್ವರ ಗದ್ದುಗೆ ಮಠದಲ್ಲಿ ನಡೆಯಿತು. ಶಿಬಿರದ ಉದ್ಘಾಟನೆಯನ್ನು ಸಿದ್ಧಗಂಗಾ ಮಠದ ಕಿರಿಯ ಶ್ರೀಗಳಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ನೆರವೇರಿಸಿದರು. ಪೂಜ್ಯ ಶ್ರೀ ಶ್ರೀಗಳವರು ತಮ್ಮ ಆಶೀರ್ವಚನದಲ್ಲಿ ''ಯುವಶಕ್ತಿ ನಮ್ಮ ದೇಶದ ಅತ್ಯಮೂಲ್ಯ ಸಂಪತ್ತು. ಯುವಶಕ್ತಿಯನ್ನು ಸಮರ್ಪಕವಾಗಿ ಬಳಸಿಕೊಳ್ಳುವ ಗುರುತರವಾದ ಜವಾಬ್ದಾರಿ ಸಮಾಜದ ಮೇಲಿದೆ. ಇಂತಹ ಶಿಬಿರ ಗಳಿಂದ ಯುವಕರಲ್ಲಿ ಸುಪ್ತವಾಗಿರುವ ಪ್ರತಿಭೆ ಹೊರಹೊಮ್ಮಲು ನೆರವಾಗುತ್ತದೆ'' ಎಂದು ತಿಳಿಸಿದರು. ವಿದ್ಯಾರ್ಥಿಗಳು ಸಮಯವನ್ನು ರಚನಾತ್ಮಕ ಕಾರ್ಯಗಳಲ್ಲಿ ಬಳಸಿಕೊಂಡು ಸದುಪಯೋಗಪಡಿಸಿ ಕೊಳ್ಳಬೇಕೆಂದು'' ಕರೆ ನೀಡಿದರು. ಶ್ರೀಗಳು ಗ್ರಾಮೀಣ ಪ್ರದೇಶದ ಜನರಲ್ಲಿ ಸ್ವಚ್ಛತೆಯ ಅರಿವು ಮೂಡಿಸಬೇಕು ಮತ್ತು ಗ್ರಾಮೀಣ ಪ್ರದೇಶದ ಅಭಿವೃದ್ಧಿಯಾದರೆ ರಾಜ್ಯ ಹಾಗೂ ರಾಷ್ಟ್ರದ ಪ್ರಗತಿ ಕಾಣಲು ಸಾಧ್ಯ. ಶಿಬಿರಾರ್ಥಿಗಳು ರಾಷ್ಟ್ರೀಯ ಸೇವಾ ಯೋಜನೆಯ ಮಹತ್ವ ತಿಳಿದು ಅದರಂತೆ ನಡೆಯಬೇಕೆಂದು'' ಆಶೀರ್ವಚನದಲ್ಲಿ ತಿಳಿಸಿದರು. ಸಮಾರಂಭದಲ್ಲಿ ಗದ್ದುಗೆ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಮಹಂತ ಸ್ವಾಮಿಗಳು ಮತ್ತು ಕಂಚಗಲ್ ಬಂಡೇಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಬಸವಲಿಂಗ ಸ್ವಾಮಿಗಳು ಉಪಸ್ಥಿತರಿದ್ದರು. ಕಾರ್ಯಕ್ರಮ ಶ್ರೀ ಯೋಗೀಶ್‌ಪ್ರಸಾದ್‌ರವರ ಪ್ರಾರ್ಥನೆಯಿಂದ ಆರಂಭವಾಯಿತು. ಶಿಬಿರದ ನಿರ್ದೇಶಕರು ಮತ್ತು ಕಾಲೇಜಿನ ಪ್ರಾಚಾರ್ಯರೂ ಆದ ಶ್ರೀ ಬಿ.ಆರ್. ಜಗದೀಶಯ್ಯ ಅವರು ಸ್ವಾಗತಿಸಿದರು. ಶ್ರೀ ಉಮಾಮಹೇಶ್ವರಯ್ಯನವರು ಕಾರ್ಯಕ್ರಮ ನಿರೂಪಿಸಿದರು. ಶಿಬಿರಾರ್ಥಿ ಶ್ರೀ ಬಿ. ನಾಗರಾಜು ಶರಣು ಸಮರ್ಪಣೆ ಮಾಡಿದರು.

### *ಆರೋಗ್ಯ ತಪಾಸಣಾ ಶಿಬಿರ*

ಶ್ರೀ ಸಿದ್ಧಗಂಗಾ ಕೈಗಾರಿಕಾ ತರಬೇತಿ ಸಂಸ್ಥೆಯ ರಾಷ್ಟ್ರೀಯ ಸೇವಾ ಯೋಜನಾ ವಿಶೇಷ ಶಿಬಿರದ ವತಿಯಿಂದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜನ್ಮಸ್ಥಳವಾದ ವೀರಾಪುರದಲ್ಲಿ ಉಚಿತ ಆರೋಗ್ಯ ತಪಾಸಣೆ ಶಿಬಿರ ಏರ್ಪಡಿಸಲಾಗಿತ್ತು. ಶಿಬಿರದಲ್ಲಿ ಮಾಗಡಿ ಸಾರ್ವಜನಿಕ ಆಸ್ಪತ್ರೆಯ ತಜ್ಞ ವೈದ್ಯರಾದ ಡಾ. ಲಕ್ಷ್ಮೀ, ಡಾ. ಶ್ರೀಕಾಂತ್ ಮತ್ತು ಬಾಣವಾಡಿ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳಾದ ಡಾ. ಸೋನಿಯಾ ಮತ್ತು ಸೋಲೂರಿನ ಪ್ರಾಥಮಿಕ ಆರೋಗ್ಯ ಕೇಂದ್ರದ ಸಿಬ್ಬಂದಿಯವರು ಭಾಗವಹಿಸಿ ಆರೋಗ್ಯ ತಪಾಸಣೆ ನಡೆಸಿದರು. ಈ ಶಿಬಿರದ ಪ್ರಯೋಜನವನ್ನು ಅಕ್ಕಪಕ್ಕದ ಗ್ರಾಮಸ್ಥರು ಪಡೆದುಕೊಂಡರು. ಇಂತಹ ಶಿಬಿರಗಳನ್ನು ವರ್ಷಕ್ಕೆ ನಾಲ್ಕು ಬಾರಿಯಾದರೂ ಏರ್ಪಡಿಸಿದರೆ ಗ್ರಾಮೀಣ ಜನತೆಗೆ ಅದರಲ್ಲೂ ಹಿಂದುಳಿದವರಿಗೆ ಅನುಕೂಲವಾಗುತ್ತದೆ ಎಂದು ಶಿಬಿರದ ಪ್ರಯೋಜನ ಪಡೆದ ಫಲಾನುಭವಿಗಳು ಮನವಿ ಮಾಡಿಕೊಂಡರು.

★

ಡಿಸೆಂಬರ್ ೨೯ರಂದು ತುಮಕೂರಿನಲ್ಲಿ ನಮ್ಮೂರ ಆಹಾರ್ ಏರ್ಪಡಿಸಿದ್ದ ಕೇಕ್ ಪ್ರದರ್ಶನವನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶ್ರೀ ರಾಘವೇಂದ್ರ, ಪತ್ರಕರ್ತರ ಸಂಘದ ಅಧ್ಯಕ್ಷ ಶ್ರೀ ಎಚ್.ಜಿ. ವೆಂಕಟೇಶಮೂರ್ತಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿದ ಜಿ.ಎಂ.ಟಿ. ಎನರ್ಜಿ ಲಿಮಿಟೆಡ್‌ನ ನಿರ್ದೇಶಕರಾದ ಶ್ರೀ ಎಂ.ವಿ. ಸುಬ್ಬರಾವ್ ಮತ್ತು ಶ್ರೀಮತಿ ಸುಬ್ಬರಾವ್ ಅವರು ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನಮಾಡಿ ಆಶೀರ್ವಾದ ಪಡೆದರು.





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೧೭೩. | ಶ್ರೀ ಹೆಚ್.ಜಿ. ಗುರುಪ್ರಸಾದ್<br>'ಹೊಂಬೆಳಗು', ನಂ. ೧೧೧೫, ೧ನೇ ಕ್ರಾಸ್,<br>ಲಲಿತಾದ್ರಿ ರಸ್ತೆ, ಸಿ ಅಂಡ್ ಡಿ ಬ್ಲಾಕ್,<br>ಕುವೆಂಪು ನಗರ, ಮೈಸೂರು-೨೩.. | ೧,೦೦೦.೦೦<br>(೨ನೇ ಕಂತು) |
| ೧೧೭೪. | ಶ್ರೀ ಎಂ. ಹುಚ್ಚಯ್ಯ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರಾಕ್ಟಿಸಿಂಗ್<br>ಎಲಿಮೆಂಟರಿ ಸ್ಕೂಲ್<br>ಬಿ.ಹೆಚ್. ರಸ್ತೆ, ತುಮಕೂರು. | ೨,೦೦೧.೦೦ |
| ೧೧೭೫. | ಶ್ರೀಮತಿ ಜಯಲಕ್ಷ್ಮಮ್ಮ,<br>ಶ್ರೀ ಲಕ್ಷ್ಮಿನರಸಿಂಹಯ್ಯ,<br>ನಂ. ೨೨, ಸಂಜೀವನಾಯಕನ ಗಲ್ಲಿ,<br>ಅವಿನ್ಯೂ ರಸ್ತೆ, ಬೆಂಗಳೂರು-೨. | ೨,೦೦೫.೦೦ |
| ೧೧೭೬. | ಶ್ರೀ ಬಿ.ವಿ. ನಾಗಭೂಷಣ<br>ದೈಹಿಕ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರಾಕ್ಟಿಸಿಂಗ್ ಎಲಿಮೆಂಟರಿ ಸ್ಕೂಲ್<br>ಬಿ.ಹೆಚ್. ರಸ್ತೆ, ತುಮಕೂರು. | ೨,೦೦೧.೦೦ |
| ೧೧೭೭. | ಶ್ರೀಮತಿ ಎನ್.ಜಿ. ಪುಷ್ಪಾವತಿ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರಾಕ್ಟಿಸಿಂಗ್ ಎಲಿಮೆಂಟರಿ ಸ್ಕೂಲ್<br>ಬಿ.ಹೆಚ್. ರಸ್ತೆ, ತುಮಕೂರು. | ೨,೦೦೧.೦೦ |
| ೧೧೭೮. | ಶ್ರೀ ಎಸ್. ನಂಜೇಗೌಡ<br>ಮುಖ್ಯ ಶಿಕ್ಷಕರು | ೨,೦೦೧.೦೦ |
| ೧೧೭೯. | ಶ್ರೀ ಎಸ್. ಚಂದ್ರಶೇಖರಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೧೮೦. | ಶ್ರೀ ಕೆ.ಬಿ. ಶಿವಣ್ಣ<br>ಸಹ ಶಿಕ್ಷಕರು | ೨,೦೦೧.೦೦ |
| ೧೧೮೧. | ಶ್ರೀ ಚಂದ್ರಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೧೮೨. | ಶ್ರೀ ಪಿ.ಎಸ್. ಶಂಭುಲಿಂಗಪ್ಪ<br>ಸಹ ಶಿಕ್ಷಕರು | ೨,೦೦೧.೦೦ |
| ೧೧೮೩. | ಶ್ರೀ ಎಸ್. ಮಹದೇವಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೧೮೪. | ಶ್ರೀ ಹೆಚ್.ಹೆಚ್. ಶಿವಕುಮಾರ್<br>ಸಹ ಶಿಕ್ಷಕರು | ೨,೦೦೧.೦೦ |
| | ಕ್ರ.ಸಂ. ೧೧೭೮ ರಿಂದ ೧೧೮೪ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಕಲ್ಲೂರು, ಗುಬ್ಬಿ ತಾಲ್ಲೂಕು. | |
| ೧೧೮೫. | ಶ್ರೀ ಎನ್.ಜಿ. ಬಸವರಾಜಯ್ಯ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಅದಲಗೆರೆ, ಗುಬ್ಬಿ ತಾಲ್ಲೂಕು. | ೨,೦೦೦.೦೦ |
| ೧೧೮೬. | ಶ್ರೀ ಕೆ.ಎಸ್. ಶಿವರುದ್ರಪ್ಪ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಅರೆಯೂರು, ತುಮಕೂರು ತಾ. | ೨,೦೦೧.೦೦ |
| ೧೧೮೭. | ಶ್ರೀ ಎಸ್. ಶಿವಣ್ಣ<br>ಸಹ ಶಿಕ್ಷಕರು | ೨,೦೦೧.೦೦ |
| ೧೧೮೮. | ಶ್ರೀ ಎಸ್.ಎಂ. ಮಲ್ಲಿಕಾರ್ಜುನಯ್ಯ<br>ಹಿಂದಿ ಶಿಕ್ಷಕರು | ೨,೦೦೧.೦೦ |
| ೧೧೮೯. | ಶ್ರೀ ಶಿವಲಿಂಗಯ್ಯ<br>ದೈಹಿಕ ಶಿಕ್ಷಕರು | ೨,೦೦೧.೦೦ |
| ೧೧೯೦. | ಶ್ರೀ ಜೆ. ಕೃಷ್ಣಪ್ಪ<br>ಸಹ ಶಿಕ್ಷಕರು | ೨,೦೦೧.೦೦ |
| ೧೧೯೧. | ಶ್ರೀ ವಿ. ಗೋವಿಂದಪ್ಪ<br>ಸಹ ಶಿಕ್ಷಕರು | ೨,೦೦೧.೦೦ |
| ೧೧೯೨. | ಶ್ರೀ ವಿ.ಎನ್. ಮುದ್ದವೀರಯ್ಯ<br>ವೃತ್ತಿ ಶಿಕ್ಷಕರು | ೨,೦೦೧.೦೦ |
| ೧೧೯೩. | ಶ್ರೀ ಎನ್. ರಾಮದಾಸಪ್ಪ<br>ಸಹ ಶಿಕ್ಷಕರು | ೨,೦೦೧.೦೦ |
| ೧೧೯೪. | ಶ್ರೀ ವೀರಭದ್ರಯ್ಯ<br>ಸೇವಕರು | ೨,೦೦೧.೦೦ |
| ೧೧೯೫. | ಶ್ರೀ ಎಸ್. ಯಂಜಾರಪ್ಪ<br>ಸೇವಕರು | ೨,೦೦೧.೦೦ |
| | ಕ್ರ.ಸಂ. ೧೧೮೭ ರಿಂದ ೧೧೯೫ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ<br>ತರೂರು, ಶಿರಾ ತಾಲ್ಲೂಕು. | |
| ೧೧೯೬. | ಶ್ರೀ ಶಿವಪುತ್ರ ಜಿ. ಬೆಲ್ಲದ್<br>ಮರಾಠ ಕಾಲೋನಿ ರಸ್ತೆ,<br>ಧಾರವಾಡ – ೫೮೦ ೦೦೧. | ೨,೦೦೧.೦೦ |
| ೧೧೯೭. | ಶ್ರೀ ಜಿ. ಗೋವಿಂದಶೆಟ್ಟಿ<br>ಜೆ. ಬ್ಲಾಕ್, ಹುಡ್ಕೋ, ವಿನೋಬನಗರ,<br>ಶಿವಮೊಗ್ಗ – ೫೭೭ ೨೦೪. | |

*(ಮುಂದುವರಿಯುತ್ತದೆ)*

## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೭೯೬. | ಶ್ರೀಮತಿ ಹೆಚ್.ಎಸ್. ಸೌಭಾಗ್ಯವತಿ<br>ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಹುಲಿಕಲ್, ಮಾಗಡಿ ತಾಲ್ಲೂಕು. | ೧,೦೦೧.೦೦ |
| ೭೯೭. | ಶ್ರೀ ಬಿ.ವೈ. ಪರಮಶಿವಯ್ಯ<br>ಶ್ರೀ ಉಮಾಶಂಕರ ಟೆಕ್ಸ್‌ಟೈಲ್<br>೭ನೇ ಅಡ್ಡರಸ್ತೆ, ಕೃಷ್ಣರಾಜನಗರ-೫೭೧ ೬೦೨.<br>ಮೈಸೂರು ಜಿಲ್ಲೆ. | ೧,೦೦೦.೦೦ |
| ೭೯೮. | ಶ್ರೀ ಎನ್.ಕೆ. ಸದಾಶಿವಯ್ಯ<br>ದೈಹಿಕ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಅದಲಗೆರೆ, ಗುಬ್ಬಿ ತಾಲ್ಲೂಕು. | ೧,೦೦೦.೦೦ |
| ೭೯೯. | ಶ್ರೀ ಕೆ.ಒ. ಓಂಕಾರಪ್ಪ<br>ಸಹ ಶಿಕ್ಷಕರು,<br>ಶ್ರೀ ನೆಹರು ಗ್ರಾಮಾಂತರ ಪ್ರೌಢಶಾಲೆ,<br>ಆದಿವಾಲ, ಹಿರಿಯೂರು ತಾಲ್ಲೂಕು. | ೧,೦೦೧.೦೦ |
| ೮೦೦. | ಶ್ರೀ ಬಿ.ಜಿ. ರಾಮಚಂದ್ರ<br>ದೈಹಿಕ ಶಿಕ್ಷಕರು,<br>ಶ್ರೀ ನೆಹರು ಗ್ರಾಮಾಂತರ ಪ್ರೌಢಶಾಲೆ,<br>ಆದಿವಾಲ, ಹಿರಿಯೂರು ತಾಲ್ಲೂಕು. | ೧,೦೦೧.೦೦ |
| ೮೦೧. | ಶ್ರೀ ಆರ್. ಮಾಳಣ್ಣ ಮತ್ತು ಕುಟುಂಬದವರು<br>ನಂ. ೧೨/ಎ, ೧ನೇ ಮುಖ್ಯರಸ್ತೆ,<br>ಶ್ರೀರಾಧಕೃಷ್ಣ ಬಡಾವಣೆ,<br>ಬೆಂಗಳೂರು – ೫೬೦ ೦೭೦. | ೧,೦೦೧.೦೦ |
| ೮೦೨. | ಶ್ರೀ ರೇವಣ್ಣಸಿದ್ಧಯ್ಯ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರಾಕ್ಟೀಸಿಂಗ್<br>ಎಲಿಮೆಂಟರಿಶಾಲೆ, ಬಿ.ಹೆಚ್. ರಸ್ತೆ,<br>ತುಮಕೂರು. | ೧,೦೦೧.೦೦ |
| ೮೦೩. | ಶ್ರೀ ಟಿ.ಆರ್. ರಾಜಶೇಖರ್<br>ಸಹ ಶಿಕ್ಷಕರು | ೧,೦೦೧.೦೦ |
| ೮೦೪. | ಶ್ರೀಮತಿ ಜಿ.ಆರ್. ಇಂದಿರಾ ಪ್ರಿಯದರ್ಶಿನಿ<br>ಸಹ ಶಿಕ್ಷಕರು | ೧,೦೦೧.೦೦ |
| ೮೦೫. | ಶ್ರೀ ಹೆಚ್.ಡಿ. ಶಿವಕುಮಾರ್<br>ವೃತ್ತಿ ಶಿಕ್ಷಕರು | ೧,೦೦೧.೦೦ |
| ೮೦೬. | ಶ್ರೀ ಲಕ್ಷ್ಮೀನರಸಯ್ಯ<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| ೮೦೭. | ಶ್ರೀ ಬಿ.ಸಿ. ಗಂಗಣ್ಣ<br>ಪ್ರಾ.ಶಾ.ಸ. | ೧,೦೦೧.೦೦ |
| ೮೦೮. | ಶ್ರೀ ರಂಗಯ್ಯ<br>ಸೇವಕರು | ೧,೦೦೧.೦೦ |
| | ಕ್ರ.ಸಂ. ೮೦೩ ರಿಂದ ೮೦೮ರ ವಿಳಾಸಗಳು<br>ಶ್ರೀ ಮಹಾಲಿಂಗೇಶ್ವರ ಪ್ರೌಢಶಾಲೆ,<br>ಕೋರಾ, ತುಮಕೂರು ತಾಲ್ಲೂಕು. | |
| ೮೦೯. | ಶ್ರೀ ಶಿವಕುಮಾರ್<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ಬಿ.ಹೆಚ್. ರಸ್ತೆ, ತುಮಕೂರು. | ೧,೦೦೧.೦೦ |
| ೮೧೦. | ಶ್ರೀ ಕೆ.ಎನ್. ಬೈರಶೆಟ್ಟಿ<br>ವೃತ್ತಿ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಅದಲಗೆರೆ, ಗುಬ್ಬಿ ತಾಲ್ಲೂಕು. | ೧,೦೦೦.೦೦ |
| ೮೧೧. | ಶ್ರೀ ಕೆ.ಸಿ. ಸಿದ್ಧಗಂಗಯ್ಯ<br>ವೃತ್ತಿ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಸೋಲೂರು, ಬೆಂಗಳೂರು ಗ್ರಾ. ಜಿಲ್ಲೆ. | ೧,೦೦೦.೦೦ |
| ೮೧೨. | ಶ್ರೀ ಟಿ.ಎಂ. ನಾರಾಯಣಸ್ವಾಮಿ<br>ಸಹ ಶಿಕ್ಷಕರು | ೧,೦೦೧.೦೦ |
| ೮೧೩. | ಶ್ರೀ ಎಂ. ಬಸವರಾಜಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೮೧೪. | ಶ್ರೀ ರಾಜಶೇಖರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೮೧೨ ರಿಂದ ೮೧೪ರ ವಿಳಾಸಗಳು<br>ನಿವೇದಿತಾ ಪ್ರೌಢಶಾಲೆ,<br>ಕ್ಯಾತಸಂದ್ರ, ತುಮಕೂರು ತಾಲ್ಲೂಕು. | |
| ೮೧೫. | ಶ್ರೀ ಬಿ.ಎನ್. ಸಿದ್ಧಲಿಂಗಯ್ಯ<br>ಮುಖ್ಯ ಶಿಕ್ಷಕರು | ೧,೦೦೧.೦೦ |
| ೮೧೬. | ಶ್ರೀ ಎ. ಸಿದ್ಧರಾಮಣ್ಣ<br>ಸಹ ಶಿಕ್ಷಕರು | ೧,೦೦೧.೦೦ |
| ೮೧೭. | ಶ್ರೀ ಎಂ. ಬಸವರಾಜು<br>ಸಹ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೮೧೫ ರಿಂದ ೮೧೭ರ ವಿಳಾಸಗಳು<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,<br>ಅರೆಯೂರು, ತುಮಕೂರು ತಾಲ್ಲೂಕು. | |

*(ಮುಂದುವರಿಯುತ್ತದೆ)*

RNI No. 17139/69

"Siddaganga" Monthly - postal Reg.No. KA/SK/TMR/385/2003-05

# ಸಿದ್ಧಗಂಗಾ 2004

॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



## ಜನವರಿ

| | | | | | |
|---|---|---|---|---|---|
| ಭಾ | * | 4 | 11 | 18 | 25 |
| ಸೋ | * | 5 | 12 | 19 | 26 |
| ಮಂ | * | 6 | 13 | 20 | 27 |
| ಬು | * | 7 | 14 | 21 | 28 |
| ಗು | 1 | 8 | 15 | 22 | 29 |
| ಶು | 2 | 9 | 16 | 23 | 30 |
| ಶ | 3 | 10 | 17 | 24 | 31 |

## ಫೆಬ್ರವರಿ

| | | | | | |
|---|---|---|---|---|---|
| ಭಾ | 1 | 8 | 15 | 22 | 29 |
| ಸೋ | 2 | 9 | 16 | 23 | * |
| ಮಂ | 3 | 10 | 17 | 24 | * |
| ಬು | 4 | 11 | 18 | 25 | * |
| ಗು | 5 | 12 | 19 | 26 | * |
| ಶು | 6 | 13 | 20 | 27 | * |
| ಶ | 7 | 14 | 21 | 28 | * |

## ಮಾರ್ಚ್

| | | | | | |
|---|---|---|---|---|---|
| ಭಾ | * | 7 | 14 | 21 | 28 |
| ಸೋ | 1 | 8 | 15 | 22 | 29 |
| ಮಂ | 2 | 9 | 16 | 23 | 30 |
| ಬು | 3 | 10 | 17 | 24 | 31 |
| ಗು | 4 | 11 | 18 | 25 | * |
| ಶು | 5 | 12 | 19 | 26 | * |
| ಶ | 6 | 13 | 20 | 27 | * |

## ಏಪ್ರಿಲ್

| | | | | | |
|---|---|---|---|---|---|
| ಭಾ | * | 4 | 11 | 18 | 25 |
| ಸೋ | * | 5 | 12 | 19 | 26 |
| ಮಂ | * | 6 | 13 | 20 | 27 |
| ಬು | * | 7 | 14 | 21 | 28 |
| ಗು | 1 | 8 | 15 | 22 | 29 |
| ಶು | 2 | 9 | 16 | 23 | 30 |
| ಶ | 3 | 10 | 17 | 24 | * |

## ಮೇ

| | | | | | |
|---|---|---|---|---|---|
| ಭಾ | 30 | 2 | 9 | 16 | 23 |
| ಸೋ | 31 | 3 | 10 | 17 | 24 |
| ಮಂ | * | 4 | 11 | 18 | 25 |
| ಬು | * | 5 | 12 | 19 | 26 |
| ಗು | * | 6 | 13 | 20 | 27 |
| ಶು | * | 7 | 14 | 21 | 28 |
| ಶ | 1 | 8 | 15 | 22 | 29 |

## ಜೂನ್

| | | | | | |
|---|---|---|---|---|---|
| ಭಾ | * | 6 | 13 | 20 | 27 |
| ಸೋ | * | 7 | 14 | 21 | 28 |
| ಮಂ | 1 | 8 | 15 | 22 | 29 |
| ಬು | 2 | 9 | 16 | 23 | 30 |
| ಗು | 3 | 10 | 17 | 24 | * |
| ಶು | 4 | 11 | 18 | 25 | * |
| ಶ | 5 | 12 | 19 | 26 | * |

## ಜುಲೈ

| | | | | | |
|---|---|---|---|---|---|
| ಭಾ | * | 4 | 11 | 18 | 25 |
| ಸೋ | * | 5 | 12 | 19 | 26 |
| ಮಂ | * | 6 | 13 | 20 | 27 |
| ಬು | * | 7 | 14 | 21 | 28 |
| ಗು | 1 | 8 | 15 | 22 | 29 |
| ಶು | 2 | 9 | 16 | 23 | 30 |
| ಶ | 3 | 10 | 17 | 24 | 31 |

## ಆಗಸ್ಟ್

| | | | | | |
|---|---|---|---|---|---|
| ಭಾ | 1 | 8 | 15 | 22 | 29 |
| ಸೋ | 2 | 9 | 16 | 23 | 30 |
| ಮಂ | 3 | 10 | 17 | 24 | 31 |
| ಬು | 4 | 11 | 18 | 25 | * |
| ಗು | 5 | 12 | 19 | 26 | * |
| ಶು | 6 | 13 | 20 | 27 | * |
| ಶ | 7 | 14 | 21 | 28 | * |

## ಸೆಪ್ಟೆಂಬರ್

| | | | | | |
|---|---|---|---|---|---|
| ಭಾ | * | 5 | 12 | 19 | 26 |
| ಸೋ | * | 6 | 13 | 20 | 27 |
| ಮಂ | * | 7 | 14 | 21 | 28 |
| ಬು | 1 | 8 | 15 | 22 | 29 |
| ಗು | 2 | 9 | 16 | 23 | 30 |
| ಶು | 3 | 10 | 17 | 24 | * |
| ಶ | 4 | 11 | 18 | 25 | * |

## ಅಕ್ಟೋಬರ್

| | | | | | |
|---|---|---|---|---|---|
| ಭಾ | 31 | 3 | 10 | 17 | 24 |
| ಸೋ | * | 4 | 11 | 18 | 25 |
| ಮಂ | * | 5 | 12 | 19 | 26 |
| ಬು | * | 6 | 13 | 20 | 27 |
| ಗು | * | 7 | 14 | 21 | 28 |
| ಶು | 1 | 8 | 15 | 22 | 29 |
| ಶ | 2 | 9 | 16 | 23 | 30 |

## ನವೆಂಬರ್

| | | | | | |
|---|---|---|---|---|---|
| ಭಾ | * | 7 | 14 | 21 | 28 |
| ಸೋ | 1 | 8 | 15 | 22 | 29 |
| ಮಂ | 2 | 9 | 16 | 23 | 30 |
| ಬು | 3 | 10 | 17 | 24 | * |
| ಗು | 4 | 11 | 18 | 25 | * |
| ಶು | 5 | 12 | 19 | 26 | * |
| ಶ | 6 | 13 | 20 | 27 | * |

## ಡಿಸೆಂಬರ್

| | | | | | |
|---|---|---|---|---|---|
| ಭಾ | * | 5 | 12 | 19 | 26 |
| ಸೋ | * | 6 | 13 | 20 | 27 |
| ಮಂ | * | 7 | 14 | 21 | 28 |
| ಬು | 1 | 8 | 15 | 22 | 29 |
| ಗು | 2 | 9 | 16 | 23 | 30 |
| ಶು | 3 | 10 | 17 | 24 | 31 |
| ಶ | 4 | 11 | 18 | 25 | * |